"Service of the Poor is the Service of God".

ವಾರ್ಷಿಕ ಚಂದಾ ಒಂದು ರೂಪಾಯಿ ಮಾತ್ರ!!! ಅಂಚೆವೆಚ್ಚ ನಾಲ್ಕಾಣೆ.

A HIGH CLASS RUPEE-MAGAZINE TO SUIT ALL INTERESTS.

ಭಿನ್ನರುಚಿಗೊಪ್ಪುವ ಕನ್ನಡ ಮಾಸಪತ್ರಿಕೆ. [ ಬಿಡಿ ಸಂಚಿಕೆ ಆಣೆ ೦—೧—೬.




EDITOR:—MANGALORE JARAPPA. ASSOCIATE EDITOR:—B. NARSAPPA.

"ಬಡವರ ಬಂಧು"ವಿನಲ್ಲಿ ಉಚ್ಚ ತರಗತಿಯ ಸಣ್ಣ ಕಥೆಗಳೂ, ಪದ್ಯಗಳೂ, ಧಾರ್ಮಿಕ ನೈತಿಕ ವಿಚಾರಗಳನ್ನೊಳಗೊಂಡ ಲೇಖಗಳೂ ಬರುವುವು. ಪತ್ರವ್ಯವಹಾರ, ಹಾಸ್ಯ, ವಿಮರ್ಶೆ, "ಟಿಟ್‌ಬಿಟ್ಸ್," ಒಳದೇಶವಿದೇಶ ವಾರ್ತೆಗಳೂ ಕೊಡಲ್ಪಡುವುವು.

ಇಂತಹ ಅಮೂಲ್ಯ ಮತ್ತು ಅತೀ ಅಗ್ಗವಾದ ಮಾಸಿಕ ಪತ್ರಿಕೆಯನ್ನು

"ಬಡವರಬಂಧು" ಕಾರ್ಯಾಲಯ, ಹಂಪನಕಟ್ಟೆ, ಮಂಗಳೂರು, ಇಲ್ಲಿಂದ ತರಿಸಿಕೊಳ್ಳಿರಿ.

| ಸಂಪುಟ ೧. | ತಾರೀಕು ೧ನೇ ಸಪ್ಟಂಬರ ೧೯೩೨. | ಸಂಚಿಕೆ ೫. |
|---|---|---|

ಶ್ರೀಃ

# ದಶಾವತಾರಸ್ತವ.

(ಇರುವನೆ ಪರಮಾತ್ಮ?) ಎಂಬಂತೆ.

ಹರಿಯನು ನೆನೆಮನವೇ!–। ದಯಾಲ । ಹರಿಯನು–ನೆನೆಮನವೇ!–॥ –ಪ– ॥
ಹರಿಯನು–ಸುಖದೈ । ಸಿರಿಯನು ನಂಬಿದ । ಕರಿಯನು ಸಲಹಿದ–। ವರನರಹರಿಯನು – ॥ – ಅ. ಪ. ॥

ವೇದವನು[೧]ದ್ಧರಿಸಿ–। ಗಿರಿಯನು । ನೋದದೊ[೨]ಳಾದರಿಸಿ–।
ಮೇದಿನಿಯನು ಪೊ[೩]ರೆ । ದಾದರದಿಂ–ಪ್ರ । ಹ್ಲಾದಗೆ[೪] ಪರಮಾ । ಹ್ಲಾದವನೆಸಗಿದ– ॥ ೧ ॥

ಬಲಿಯೆದೆ[೫]ಯನು ತುಳಿದು–। ಪಾರ್ಥಿವ । ಕು[೬]ಲವನವನು ಕಡಿದು–।
ಖಲದಶಕಂಠನ[೭] । ತಲೆಗಳ ಖಂಡಿಸಿ–। ಗೆಳೆಯ ಪಾರ್ಥ[೮]ನಿಂ । ಗೊಲಿದಾ–ವರದ– ॥ ೨ ॥

ಬತ್ತ[೯]ಲೆಯಲಿ ನಿಂದು । ತ್ರಿಪುರರ । ಸತ್ವವ ಮುರಿದಂದು–।
ಮತ್ತ ಮ್ಲೇಂಛ[೧೦]ರಾ । ನೆತ್ತರ ಚೆಲ್ಲಿದ–। ಹತ್ತವತಾರವ । ನೆತ್ತಿದ ಶಕ್ತಿಯ– ॥ ೩ ॥

ಪುಂಡೂರು ಲಕ್ಷ್ಮೀನಾರಾಯಣ ಪುಣಿಂಚಿತ್ತಾಯ.

"BADAVARA BANDHU"








ESTABLISHED 1932.

ಸಂಪುಟ ೧. | ತಾರೀಕ ೧ನೇ ಸಪ್ಟಂಬರ ೧೯೩೨. | ಸಂಚಿಕೆ ೫.




# ತಿರುಕನ ಎಣಿಕೆ.

ಶ್ರೀ. ಡಿ. ಕೆ. ಭೀಮಸೇನರಾವ, ಎಂ. ಎ., ಹೈದ್ರಾಬಾದ್.

(ಜ.ಕ.)

ಸಂಜೆಯಲಿ ತಿಂದುಳಿದ
ಎಂಜಲಿನ ತಂಗೂಳ
ಹಳಸಿಪ್ಪ ಕೈಮುದ್ದೆ
ಎನ್ನ ಭಾಗದ ಭೋಜ್ಯ ಹೇ ದೇವ!

ಅರೆಹೊಟ್ಟೆಯೊಪ್ಪೊತ್ತು
ತಿರಿದುಣಿಸು ಕರಿಕನ್ನ
ತಿರಿಯದಿರೆಯುಪವಾಸ
ಎನ್ನ ಭಾಗದ ಭಾಗ್ಯ ಹೇ ದೇವ!

ಮುರಿದ್ದೊಂದು ಹುಲ್ಲಮನೆ
ಹರಿದ ಕಂಬಳಿಹಾಸು
ಹೊದಿಯೆ ಚಿಂದಿಯ ಪಂಚೆ
ಎನ್ನ ಭಾಗದ ಭೋಗ ಹೇ ದೇವ!

ತಿರಿದುಂಬ ಹರಿವಾಣ
ಜಾಳಂದರದ ಚೆಂಬು
ಕಾದಿಡಲು ಜೋಳಿಗೆಯು
ಎನ್ನಭಾಗದ ವಿಭವ ಹೇ ದೇವ!

ಚಳಿಯು ಕೋಳಿಗೆಯೊಡಲು
ಉಪ್ಪೇರಿ ಮೈಯೊಡೆದು
ಬಿಸಿನೆತ್ತರೂರುತಿದೆ
ಎನ್ನ ಭಾಗದ ಭೋಗ ಹೇ ದೇವ!

ಬೇಸಗೆಯ ಬೇಗೆಯಲಿ
ಆಸರವ ಕಾಣದಲೆ
ಬಿಸಿ ಮರಳಲುರುಳುವುದೆ
ಎನ್ನ ಭಾಗದ ಭೋಗ ಹೇ ದೇವ!

ಸುರಿಮಳೆಯ ಬರಸಿಡಿಲ
ಬಿರುಗಾಳಿಯುಬ್ಬರದಿ
ಮರುಗುತ್ತ ಬಾಳುವುದೆ
ಎನ್ನ ಭಾಗದ ಭೋಗ ಹೇ ದೇವ!

ಮನೆಮನೆಯ ತಿರುಗುವುದು
ಮಾನವರ ಬೇಡುವುದು
ಪರಿಭವದಿ ಜೀವಿಪುದು
ಸರಿಯೊಪ್ಪಿಹುದೆ ನಿನಗೆ ಹೇ ದೇವ!

ಸಿಂಗರದ ಕರುಮಾಡ
ಚೆನ್ನೆಯರ ಸವಿಕೂಟ
ಹೊನ್ನ ಹರಿವಾಣಊಟ
ಕರುಣಿಸೊಮ್ಮೆನಗೆ ದೇವರ ದೇವ!

ಸಣ್ಣಕ್ಕಿ ಬೋನವನು
ಹಸನಾದ ತುಪ್ಪವನು
ಕೆನೆವಾಲ ಕೆನೆಮೊಸರ
ಬಯಸುತಿದೆ ನಾಲಗೆಯು ಹೇ ದೇವ!

ಸಂಗೀತ ಮೇಳದಲಿ
ಮಿದುವಪ್ಪ ಪಳ್ಳಿಯಲಿ
ರನ್ನೆಯರ ತಳ್ಕೆಯಲಿ
ಚಳಿಯು ಕಳೆಯುವ ಬಯಕೆ ಹೇ ದೇವ!

ಪನ್ನೀರ ಮಿಂಯುತ್ತ
ಪರಿಮಳವ ಪೂಸುತ್ತ
ತಂಪಾದ ಬೀಡಿನಲಿ
ಬೇಸಗೆಯಲಿರಿಸೊಮ್ಮೆ ಹೇ ದೇವ!

ಮಳೆಗಾಳಿ-ಸಿಡಿಲಿಂದ
ಬಳಲಿದ್ದ ದೇಹಕ್ಕೆ
ಸುಖವಾಸ ಕೊಟ್ಟೊಮ್ಮೆ
ಕಾಪಾಡು ಕರುಣದಿಂ ಹೇ ದೇವ!

ಎಲ್ಲೆಲ್ಲಿ ನೀನಿರುವೆ
ಎಲ್ಲೆಲ್ಲಿ ಕಣ್ಣುಂಟು
ನಿನಗೆಂದು ಕೇಳಿಹೆನು
ಈ ಸೊಲ್ಲು ನಿಜವುಂಟೆ ಹೇ ದೇವ!

ಎನ್ನಿರವ ನೀನರಿತು
ಎನ್ನ ಬಯಕೆಯ ಸಲಿಸಿ
ಉನ್ನತನ ಮಾಡೆಂದು
ಕೈಯೊಡ್ಡಿ ಬೇಡುವೆನು ಹೇ ದೇವ!

---

ಮಹಾಶಯರುಗಳಾದ ಕನ್ನಡ ಲೇಖಕರು ದಯಮಾಡಿ ಪುಟ ೬ರಲ್ಲಿರುವ 'ಗೀತಾಗ್ರಂಥ ಸ್ಪರ್ಧೆ'ಗೆ ಗಮನವನ್ನೀಯುವರಾಗಿ ನಂಬುತ್ತೇವೆ.—ಸಂ. ಬ. ಬ.

## ನಮ್ಮ ತೋಟಿಗಳ 'ಮುಷ್ಕರ'.

'ಬಡವರ ಬಂಧು' ಮಹಾತ್ಮಾ ಗಾಂಧಿಯವರು ಒಮ್ಮೆ ಎಂದಂತೆ--, "ಮುಷ್ಕರವೆಂಬುದು ಈಗ ಹಿಂದೂದೇಶದಲ್ಲಿ ನಿತ್ಯದ ನೋಟ. ದುಡಿಯುವವರೊಳಗೂ, ದುಡಿಸುವವರೊಳಗೂ ಅಂಚಕೊಂಚ ಭೇದಾಭಿಪ್ರಾಯವು ತಲೆದೋರಿತೆಂದರೆ, ಅಲ್ಲಿ ಮುಷ್ಕರ! ವಿದ್ಯಾರ್ಥಿಗಳೊಳಗೂ ಉಪಾಧ್ಯಾಯರುಗಳೊಳಗೂ ಅಲ್ಪ ಸ್ವಲ್ಪ ವ್ಯತ್ಯಾಸವು ಕಂಡುಬಂದರೆ, ಒಡನೆ ಮುಷ್ಕರ! ಹೀಗೆ ಎಲ್ಲಿ ನೋಡಿದರೂ ಮುಷ್ಕರ!" ಇದಕ್ಕೆ ಕಾರಣವಾದರೂ ಏನು?—ಜನಾಂಗದ ಹೃದಯಾಂತರಾಳವನ್ನು ಹೊಕ್ಕು ಉದ್ರೇಕದ ಎಚ್ಚರಿಕೆಯನ್ನಿತ್ತ ಸ್ವಾತಂತ್ರ್ಯಕಾಂಕ್ಷೆಯ ಅಗೋಚರ ಶಕ್ತಿಪ್ರಭೆಯೇ ಇದಕ್ಕೆ ಮುಖ್ಯ ಕಾರಣ.

ದೇಶವಾತಾವರಣದ ವರ್ಚಸ್ಸು ಯಾರನ್ನೂ ಬಿಟ್ಟಿರುವುದಿಲ್ಲ. ಕುರಿಗಳಂತಿದ್ದವರು ಈಗ ಸಿಂಹಗಳಂತೆ ಘರ್ಜಿಸುತ್ತಿರುವರು. ಕುರುಬರಂತಿದ್ದವರು ಈಗ ರಜಪೂತರಂತಾಗಿದ್ದಾರೆ. ಕಣ್ಮುಚ್ಚಿ ಹಿಂದುಳಿದವರು ಈಗ ಕಣ್ತೆರೆದು ಮುಂಬರಲು ಟೊಂಕ ಕಟ್ಟಿದ್ದಾರೆ; ಸ್ವಯಂ ಪ್ರತಿಷ್ಠೆಯ, ಸ್ವಯಂಶಕ್ತಿಯ ದೀಪವನ್ನು ಇಷ್ಟು ಸಮಯವೂ ಮರೆಯಲ್ಲಿಟ್ಟು ಕುಳಿತಿರುವವರು ಈಗ ಅದನ್ನು ಹೊರತೆಗೆದು ಉಜ್ವಲವಾಗಿ ಬೆಳಗತೊಡಗಿರುತ್ತಾರೆ. ಹಾಗೆ ನಮ್ಮ ಮುನಿಸಿಪಾಲಿಟಿಯ ಸೇವಾನಿರತರಾಗಿದ್ದ "ತೋಟಿ"ಗಳೂ ಏಕೋ ಎಚ್ಚತ್ತಿದ್ದಾರೆ.

ಕಳೆದ ಒಂದೆರಡು ತಿಂಗಳುಗಳ ಹಿಂದೆ ಅಕಾರಣವಾಗಿಯೋ ಸಕಾರಣವಾಗಿಯೋ, ತೋಟಿಗಳು ತಮ್ಮ ವರ್ತನೆಯ ಭಾವೀ ಫಲವೇನಿರಬಹುದೆಂಬುದನ್ನರಿತೋ, ಅರಿಯದೆಯೋ, 'ಮುಷ್ಕರ'ದ ಚಿಹ್ನೆಯನ್ನು ತೋರಿಸಿಯೇ ಬಿಟ್ಟರು. ಅವರಲ್ಲಿ ಕೆಲವರು ತಮ್ಮ ಜನರ "ಪ್ರಾತಿನಿಧ್ಯವನ್ನು ವಹಿಸಿ", ಚೆಯರ್‌ಮೇನರನ್ನು ಸಂದರ್ಶಿಸಿ, ತಮ್ಮ ನಿವೇದನೆಗಳನ್ನು ಮುಂದಿಟ್ಟರೆಂದು ತಿಳಿದುಬರುತ್ತದೆ. ತಮ್ಮಲ್ಲಿ ಕೆಲವು ಮಂದಿಗಳ ಮೇಲೆ ಹೊರಿಸಿದ ಹೆಚ್ಚಿನ ಕಾರ್ಯಭಾರವನ್ನು ಹೊರಲಸಾಧ್ಯವೆಂದೂ, ಅವರನ್ನು ಆ ಹೆಚ್ಚಿನ ಕೆಲಸದಿಂದ ವಿಮುಕ್ತಗೊಳಿಸದಿದ್ದರೆ ತಾವು ಕೈಕಟ್ಟಿ ಸುಮ್ಮಗೆ ಕುಳಿತುಕೊಳ್ಳಬೇಕಾಗುವುದೆಂದೂ ಹೇಳಿ "ಗದರಿಸಿ?"ದರಾಗಿ ತಿಳಿದುಬಂದಿದೆ.

ಈ ತೋಟಿಗಳ ಕೇಳಿಕೆಗಳು ಆರ್ಥಿಕ ದುಃಸ್ಥಿತಿಯ ಮುಗ್ಗಟ್ಟಿನ ಈ ಸಂದಿಗ್ಧ ಸಮಯದಲ್ಲಿ ಸ್ವೀಕಾರಾರ್ಹವಲ್ಲವಾದರೂ, ಇವರ ವಿಮರ್ಶನಾದೃಷ್ಟಿರಹಿತ ವರ್ತನೆಯು ಅಭಿನಂದನೀಯವಲ್ಲವಾದರೂ, ಮುನಿಸಿಪಾಲಿಟಿಯು (ಅವರಿಗೆ ಎಚ್ಚರವನ್ನಿತ್ತ ಮೇಲೆ) ಕಲ್ಲಿಕೋಟೆ, ಕೊಯಂಬುತ್ತೂರುಗಳಿಂದ ಇನ್ನಿತರ ಸಮಾರು ೬೦ಮಂದಿ ಹೊಸ ತೋಟಿಗಳನ್ನು ತರಿಸಿಕೊಂಡುದು ಭಯಭೀತಿಗಳಿಗೆ ಕಾರಣೀಭೂತವಾಗಿದ್ದಿತು.

ಕೆಲವರು "ಈಗಿನ ತೋಟಿಗಳಿಗೆ ಅಹಂಕಾರದ ಮಬ್ಬು ಕಣ್ಣಿಗಡರಿಯದೆ!!!" ಎಂದು ಪ್ರತಿಪಾದಿಸಿ, ಮತದ್ವೇಷಾಗ್ನಿಯನ್ನು ಕಾರುತ್ತಿರುವರು. ಇವರಲ್ಲಿ ಪತಿತವರ್ಗದವರ ಶ್ರೇಯಸ್ಸಹಿಷ್ಣುಗಳೆಷ್ಟು ಮಂದಿ? ತೋಟಿಗಳ ನಿಜವಾದ ಕುಂದುಕೊರತೆ (Grievances)ಗಳನ್ನರಿತು ಮಾತನಾಡುವವರೆಷ್ಟು ಜನರು? ನವಸುಧಾರಣೆಯ ಪ್ರಚಂಡ ಗಾಳಿಯು ದಶದಿಕ್ಕುಗಳಿಂದಲೂ ಬೀಸುತ್ತಿರುವ ಈ ಕಾಲದಲ್ಲಿ ಹಿಂದೀಯರಲ್ಲನೇಕರು ಇನ್ನೂ ಪರಮತ ಸಹಿಷ್ಣುಗಳಾಗಲು ಸಾಧ್ಯವಿಲ್ಲವೆಂದಾದರೆ, ಮತ್ತೇನುಳಿದಂತಾಯಿತು?

ತೋಟಿಗಳೆಂದರೆ ನಿಜವಾಗಿಯೂ ನಿರಕ್ಷರಕುಕ್ಷಿಗಳು; "ವಿದ್ಯೆಯಿಲ್ಲದ ಪಶುಗಳು"-ಅಜ್ಞಾನಿಗಳು; ಅದರಲ್ಲೂ ಕೇವಲ ಬಡವರು! ಹಾಗಿರುವಾಗ ಅವರ ವರ್ತನೆಯು ಎಷ್ಟರಮಟ್ಟಿಗೆ ಸುಧಾರಿತವಾಗಿರಬಹುದೆಂದು ನಾವೇ ಊಹಿಸಬಹುದು.

ನಾವು ನಮ್ಮ ಕಳೆದ ಸಂಚಿಕೆಯಲ್ಲೆಂದಂತೆ-"ನಮ್ಮ ಜನರಿಗೆ ಮುಷ್ಕರವೆಂದರೇನೆಂದು ತಿಳಿಯದು. ತಾವು ಕೈಕಟ್ಟಿ ಕುಳಿತು ಇನ್ನಿತರರೂ ಹಾಗೆ ಮಾಡದೆ ಹೋದರೆ, ಅಂತಹವರಿಗೆ ಹೊಡೆದು ಬಡೆದು ಅವರನ್ನು ಹಿಂಸಿಸುವುದೇ ನಿಜವಾದ 'ಮುಷ್ಕರ'ವೆಂದು ಅನೇಕ ಅಜ್ಞಾನಿಗಳ ಭಾವನೆ".

ಬಡತನವು ಪೈಶಾಚಿಕವಾದುದು; ಅದರಲ್ಲೂ ಹಸಿವೆಯೆಂಬುದು ಕಿರಾತಸ್ವರೂಪದ್ದು. ಮತ್ತು ಉಪವಾಸವೆಂಬುದು ರಾಕ್ಷಸೀ ಸ್ವಭಾವದ್ದು. ನಮ್ಮ ತೋಟಿಗಳು ಇದನ್ನು ತಿಳಿದು ಸಂದರ್ಭೋಚಿತವಲ್ಲದ ಕೇಳಿಕೆಗಳನ್ನು ಹಿಂದಿಟ್ಟು, ಮ್ಯುನಿಸಿಪಾಲಿಟಿಯ ಕೆಲಸಕ್ಕೆ ನ್ಯಾಯರೀತಿಯಿಂದ ಮುಂಬರುವುದುತ್ತಮವಲ್ಲವೇ?

॥ ಶ್ರೀ ವೀರೇಶ ಪ್ರಸನ್ನಃ ॥

## ಪ್ರಾರ್ಥನೆ.

ನನ್ನ ಕನ್ನಡ ನುಡಿಯ ನುಡಿಯುತೆ
ತನ್ನ ಜನರಿಗೆ ನೀತಿ ಪೇಳುತೆ
ಗನ್ನ ಕವಿಗಳ ವಿವಿಧ ಲೇಖನ ಪದ್ಯದಿಂ ಮೆರೆವಾ
ರನ್ನ ಕನ್ನಡದೇಳ್ಗೆಗೋಸುಗ
ಮೊನ್ನೆ ಜನಿಸಿದೆ ಮಂಗಳೂರಲಿ,
ಚಿನ್ನ! "**ಬಡವರ ಬಂಧು**" ಮಾಸಿಕ ಕೊಳ್ಳಿರೈ ಬುಧರು!

ತಾಯ್ನುಡಿಯ ಸೇವಕ,

ಮಲ್ಲನ ಗೌಡರು, ಹೊಮ್ಮರಡಿ.



# ಅಡಿಗೆಯ ಕೋಣೆಯಲ್ಲಿ.

(ಲೇಖಕ: ಶ್ರೀ। ಕುಡ್ಪಿ ವಾಸುದೇವ ಶೆಣ್ಯೆ, ಕರಂಗಲಪಾಡಿ.)

ಪಂಚೇಂದ್ರಿಯಗಳಲ್ಲಿ ನಯನವೇ ಪ್ರಾಧಾನ್ಯವನ್ನುಳ್ಳುದಾದರೆ ಮನೆಯ ಎಲ್ಲ ಕೋಣೆಗಳಲ್ಲೂ ಅಡಿಗೆಕೋಣೆಯೇ ಶ್ರೇಷ್ಠ. ಅಡಿಗೆಕೋಣೆಯಲ್ಲಿ ಯಾವುದಾದರೂ ಅಕ್ರಮುಗೊಂಡರೆ ಮನೆಯೆಲ್ಲ ಧ್ವಂಸ! ಅಂತಹ ಅಡಿಗೆಕೋಣೆಯ ಆಡಳಿತಗಾರನಾದ ಅಡಿಗೆಯವನ ಯೋಗ್ಯತೆಯನ್ನು ಬೇರೆ ತಿಳಿಸಬೇಕೆ? 'ಊರಿಗೆ ಅರಸನಾದವನು ತಾಯಿಗೆ ಮಗ'ನೆಂದಿರುವುದಕ್ಕೆ 'ಅಡಿಗೆಯವನಿಗೆ ಆಳು' ಎಂದು ಕೂಡಿಸಿ ಓದಿದರೆ ಮಾತ್ರ ಅಡಿಗೆಯವನ ಉಚ್ಚ ಸ್ಥಾನದ ಒಂದು ನೆರಳನ್ನಾದರೂ ಕಂಡಂತಾಗುವುದು. ನಿಮ್ಮೊಡನೆ ಗುಟ್ಟೇಕೆ? ನಾನೊಬ್ಬ ಅಡಿಗೆ ಭಟ್ಟ.

ಅರಸರಿಗಲ್ಲವಾದರೂ ಅರಸರಂತಹ ಶ್ರೀಮಂತರಿಗೆ ಅಡಿಗೆ ಮಾಡಿ ಬಡಿಸಿದ್ದೇನೆ. ನನ್ನ ಬೆನ್ನ ಮೇಲೆಯೂ ಮಸಿಯಿರುವುದೆಂಬುದನ್ನು ಗಣಿಸದೆ ಮೊಗವರಳಿಸಿ, 'ಭೇಷ್ ಚಮುರ್ಚರಿ, ಭೇಷ್!' (ನನ್ನ ಹೆಸರು ಚಮುರ್ಚರಿ! ಚಿಕ್ಕವನಿದ್ದಾಗ ಚಮುರ್ಚರಿ ಉಂಡೆ ಮಾರುತ್ತಿದ್ದೆ. ಹಾಗೇ ಕರೆದು ರೂಢಿ. ನಿಜವಾದ ಹೆಸರನ್ನು ನಾನೂ ಮರೆತಿದ್ದೇನೆ) ಎಂದು ಸಮಾನಸ್ಕಂಧರಂತೆ ಬೆನ್ನ ಮೇಲೆ ತಟ್ಟಿ, ಅರಿವಿಲ್ಲದೆ ಆ ಮಸಿಯ ಕೈಯನ್ನು ತಮ್ಮ ಮಡಿ ವಸ್ತ್ರಕ್ಕುಜ್ಜಿಕೊಂಡವರೆಷ್ಟೋ ಮಂದಿ. 'ಮಿತ್ರಭೋಜನ'ಗಳಾದರೆ ನನಗೆ ಮರುದಿನ ಸ್ನಾನದ ಆವಶ್ಯಕತೆಯಿರುತ್ತಿದ್ದಿಲ್ಲ. ಇಂತಹ ಹತ್ತೆಂಟು ಮಂದಿ, ಬೆವರಿದ ನನ್ನ ಬೆನ್ನಿಗೂ ಹೊಟ್ಟೆಗೂ ಹೊಡೆದ ಗುದ್ದುಗಳು; ಹೆಂಗಸರು ಆಗಾಗ್ಗೆ ಅಡಿಗೆ ಕೋಣೆಗೆ 'ಕೇಸರಿ ಬಾತಿಗಾಗಿಯೋ ತೊವ್ವೆಗಾಗಿಯೋ ಬಂದು ನನ್ನ ಮೈಮೇಲೆ ಬಾಗಿ ಅದನ್ನು ತೆಗೆವಾಗ ಅವರ ರೇಶ್ಮೆಸೀರೆಸೆರಗುಗಳ ಝಾಡಣೆ; ಇವುಗಳಿಂದ ನನ್ನ ಮೈ ಮೇಲಿನ ಕೊಳೆಯೆಲ್ಲ ಹೋಗಿ, ತಿಕ್ಕಿದ ತಾಮ್ರದ ಪಾತ್ರೆಯಂತೆ ಹೊಳೆಯುತ್ತಿದ್ದೆ. ಮನೆಯಜಮಾನನ ನೆಂಟರಾರಾದರೂ ಬಂದರೆ, ಮೊದಲ ದಿನವೇ ನನಗೆ ಒಂದು ರೂಪಾಯಿಯ ಕಪ್ಪ ಕೊಟ್ಟು ಊಟಕ್ಕೆ ಕುಳಿತು, ಹತ್ತು ದಿನಗಳಲ್ಲಿ ಮನೆಯಜಮಾನನಿಗಿಂತಲೂ ಭಾರದಲ್ಲಿ ಐದು ರಾತ್ತಲ ಹೆಚ್ಚಿ ಮತ್ತೊಂದು ರೂಪಾಯಿ ಕಾಣಿಕೆಯನ್ನು ಗುಟ್ಟಾಗಿ ಸಲಿಸಿ ಹೋಗುತ್ತಿದ್ದರು. ಇಂತಹ ಕಪ್ಪಕಾಣಿಕೆಗಳ ರೂಢಿಯನ್ನರಿಯದವರು ಅಗ್ನಿಮಾಂದ್ಯವಾಗಿಯೋ; ಅತಿಸಾರದ ಅನುಭವ ಪಡೆದೊ, ಕಣ್ಣುಗುಡ್ಡೆಗಳನ್ನು ಕಾಲು ಇಂಚು ಒಳಗೆಳೆದುಕೊಂಡು, ಎರಡು ರೂಪಾಯಿಗಳ ಲೋಭತನ ತೋರಿ ಇನ್ನೂರು ರೂಪಾಯಿಗಳ ಚಿಕಿತ್ಸೆಗಾಗಿ ತಮ್ಮ ಊರಿಗೆ ಹೋದುದೂ ಇದೆ. ಮನೆಯಜಮಾನನಾದರೂ, ನನಗೆ ವೈದ್ಯನಷ್ಟೆ ಮನ್ನಣೆ ಕೊಟ್ಟು ನಡೆಸಿಬರುತ್ತಿದ್ದನು. ಅಡಿಗೆಕೋಣೆಯೆಂಬುದು ಒಂದು 'ಡಿಸ್ಪೆನ್ಸರಿ' (ಔಷಧಾಲಯ)ವೆಂದೂ, ಅಡಿಗೆಯವನು ಡಾಕ್ಟರನೆಂದೂ, ಮನೆ ಮಂದಿಯೆಲ್ಲ ರೋಗಿಗಳೆಂದೂ ಆಗಾಗ್ಗೆ ಆತನು (ನನ್ನ ಹಿಂದಿನ ಯಜಮಾನನು) ಹೇಳುತ್ತಿದ್ದನು. ನನ್ನ ಜವಾಬುದಾರಿಯನ್ನರಿತೇ ನಾನು ರೋಗಿಗೆ ತಕ್ಕಂತೆ ಪಥ್ಯ ಕೊಡುತ್ತಿದ್ದೆ. ಪಲ್ಯಕ್ಕೆ ಉಪ್ಪು ಕಡಿಮೆಯಾದರೆ ಅಥವಾ ಹೆಚ್ಚಿದರೆ ಇಲ್ಲವೇ ಉಪ್ಪೇ ಹಾಕಿರದಿದ್ದರೆ ಯಜಮಾನನು ಆ ಹೆಚ್ಚುಕಡಮೆಗಳನ್ನು ವಿನಯದಿಂದಲೇ ಸೂಚಿಸುವನು. ಇಲ್ಲದಿದ್ದರೆ, ಮರುದಿನ ಎಲ್ಲ ಪಲ್ಯಗಳೂ ಉಪ್ಪುಉಪ್ಪಾಗಿ, ಅನ್ನವು ಖಾರವಾಗಿ, ಮಜ್ಜಿಗೆಯು ಬಹು ಸಪ್ಪೆಯಾಗಿ ದಿನವೇ ಕೆಡುವುದೆಂಬುದನ್ನಾತನು ಚೆನ್ನಾಗಿ ಬಲ್ಲನು. ಇದೊಂದು ತಿಳಿದಿರಲಿ;—ಸೇವಕರನ್ನಿಡುವುದು ನಿಮ್ಮ ಅಧಿಕಾರ ಮದವನ್ನು ಪ್ರಯೋಗಿಸಿ ಗೌರವಪಡುವುದಕ್ಕಲ್ಲ, ನೀವು ಅವರ ದಾಸರಾಗಿ ದೈನ್ಯವನ್ನು ಕಲಿಯಲು! ಯಾರು ದಾಸರನ್ನಿಟ್ಟುಕೊಂಡಿಲ್ಲವೊ ಅವರು ಮಾತ್ರ ಗೌರವದಿಂದ ತಲೆಯೆತ್ತಿ 'ನಾನು ದಾಸನಲ್ಲ!' ಎಂದು ಹೇಳಬಹುದು. ಆ ತನಕ ದಾಸನೆಂಬವನು ಧನಿ; 'ಧನಿ'ಯೆಂಬವನು ಆ ದಾಸನ ಅಡಿಯಾಳು!

ಅದೆಲ್ಲ ಹಿಂದಿನ ಪುರಾಣ. ನಾನು ಎಂದು ಕೂರ್ಮರಾಯರ ಮನೆಗೆ ಬಂದೆನೋ, ಅಂದೇ ನನ್ನ ಗೌರವವೆಲ್ಲ ಭಸ್ಮ. ಅವರ ಮನೆಯ ಹೊಸ್ತಿಲಿನೊಳಗೆ ಕಾಲಿಟ್ಟ ಕ್ಷಣದಿಂದ ನನ್ನ 'ವೈದ್ಯ'—'ಕಂಪೌಂಡರ' 'ಅರಸು'—ಎಲ್ಲ ಬಿರುದುಗಳೂ ಮಾಯ! ಅರಸು ಇಲ್ಲದ ರಾಜ್ಯದಲ್ಲಿ ಅರಸು ಕಾಲಿಟ್ಟರೆ ಹೇಗೆ ಸಾಮಾನ್ಯ ಪ್ರಜೆಯಂತಾಗುವನೋ, ಹಾಗೆ ನನ್ನ ಗತಿಯೂ ಆಯಿತು. ಸರೋಜಾಬಾಯಿ (ಅಥವಾ 'ದೇವಿ') — ಕೂರ್ಮರಾಯರ ರಾಣಿ — ಅಂಥವಳು. ಅವಳ ಮನೆಯಲ್ಲಿ ಅವಳೇ ಡಾಕ್ಟರ್; ಅವಳೇ ಕಂಪೌಂಡರ್; ಅವಳೇ ಇಂಜಿನಿಯರ್; ಅವಳೇ ಹೆಲ್ತ್ ಆಫೀಸರ್ ಅವಳೇ ಪೋಲೀಸ್; ಅವಳೇ ಜಡ್ಜ್; ಅವಳೇ—ಎಲ್ಲವೂ ಅವಳೇ! ನಾವೆಲ್ಲ (ಆಕೆಯ ಗಂಡನು ಕೂಡಿ)—ಬರೇ ನಾವೇ, ಅಷ್ಟೇ!

ಹಿಂದಿನ ರಾಯರು ದಿವಾಳಿಯಾದರು. ಆದರೂ ನನ್ನನ್ನಿಟ್ಟುಕೊಂಡು ಎರಡು ತಿಂಗಳು ದಿವಾನಗಿರಿ ಪ್ರದರ್ಶಿಸಿದರು. ಎಲ್ಲ ಒಣ ಜಂಭ! ಸಾಲ ಹೆಚ್ಚಿ, ಉತ್ಪತ್ತಿಯಿಲ್ಲದಾಗ ಅಡಿಗೆಯವನಂತಹ ದುಂದುವ್ಯಯದ ಪ್ರಾಣಿಯನ್ನು ಸಾಕುವುದಸಾಧ್ಯವೆಂದು ತಿಳಿದು, ಒಂದು ತಿಂಗಳ ಸಂಬಳವನ್ನು ಹೆಚ್ಚಾಗಿ ಕೊಟ್ಟು ಔದಾರ್ಯವನ್ನು ಪ್ರಕಟಿಸಿ 'ಚಮುರ್ಚರಿ! ನನ್ನ-ನಿನ್ನ ಋಣಾನುಬಂಧ ತೀರಿತು!' ಎಂದಿಷ್ಟನ್ನೆ ಹೇಳಿ, ಕಣ್ಣೀರಿಟ್ಟು ಬೀಳ್ಕೊಟ್ಟರು. ನೀರೆಲ್ಲ ಹಿಂದೆ ಬೆವರಾಗಿ ಹೋಗುತ್ತಿತ್ತಾದ ಕಾರಣ ನನಗೆ ಕಣ್ಣಿನಿಂದ ಸುರಿಸಿ ಅಭ್ಯಾಸವಿರಲಿಲ್ಲ. ಆದರೆ, ರಾಯರ ಕಣ್ಣೀರನ್ನು ನೋಡಿ, ಆ ಅಂತಃಕರಣದ ಮಾತನ್ನೂ ಕೇಳಿ, ದಸಕ್ಕನೆ ಕಣ್ಣೀರು ಇಳಿಯಿತು. 'ಸಂಬಳವಿಲ್ಲದಿದ್ದರೂ...' ಎಂದು ನಾನು ದುಃಖಾತಿರೇಕದಿಂದ ತೊದಲ್ನುಡಿಯುತ್ತಿರಲು, 'ಇಲ್ಲ, ಮುಂದೆ ನಿನ್ನನ್ನು ಕರೆಸಿಕೊಳ್ಳುವೆನು. ದೇವರ ಕೃಪೆಯಿಂದ ನಿನಗೆ ಮತ್ತೂ ಒಳ್ಳೆಯ ಸ್ಥಾನ ಸಿಗಲಿ!' ಎಂದು ಹರಸಿ ಕಳುಹಿಸುತ್ತ ಏನೋ ನೆನಪಾಗಲು ಹಿಂದೆ ಕರೆದು, ಒಂದು ಕಾಗದ ಬರೆದು ನನ್ನನ್ನು ಈ ಕೂರ್ಮರಾಯರಲ್ಲಿಗೆ ಕಳುಹಿದುದು. ಕೂರ್ಮರಾಯರೆಂಬ ಹೆಸರನ್ನು ಕೇಳಿದ ಕೂಡಲೇ ನನಗೆ, ಕರಿ ತೊಗಲಿನ—ಬೊಜ್ಜು ಮೈಯ್ಯ—ಒಂದು ಪ್ರಾಣಿಯ ಚಿತ್ರವು ಹೊಳೆದಿತ್ತು. ಆದರೆ,—ಅಲ್ಲ; ಕೂರ್ಮರಾಯರು—ತೆಳ್ಳಗಿನ, ಬಿಳಿ ತೊಗಲಿನ—ಕಿರುದನಿಯ—ಚಿಕ್ಕ ದೃಷ್ಟಿಯ—ನಿತ್ಯಕಫದ—ಮೆಲ್ನಡೆಯ-ನಾಜೂಕು ನಡೆ—ನುಡಿಗಳ ದಿವ್ಯ ಪುರುಷರಾಗಿದ್ದರು. ಅವರ ಹೆಂಡತಿ,—

ಅಹುದು, ಈ ಹೆಂಡತಿ...ಅತಿಯಾಗಿ ಹೆಂಡ ಕುಡಿದರೆ ಅದನ್ನೆ ಹೆಂಡತಿಯೆನ್ನುವರೆಂದು ನನ್ನ ಮತ. ಇಲ್ಲದಿದ್ದರೆ ಆ ಕೂರ್ಮರಾಯರಿಗೆ ಈ ಮೊಸಳೆ ರಾಣಿಯೇ? ಈಕೆ ಅತ್ತಿತ್ತ ತಿರುಗುವಾಗ ರಾಯರು ಜಜ್ಜಿಹೋಗದೆ ಹೇಗೆ ಜೀವವನ್ನು ಕಾಪಾಡಿಕೊಂಡಿರುವರೆಂದೇ ನನ್ನಂತೆ ನಿಮಗೂ ಆಶ್ಚರ್ಯವಾಗದಿರದು. ಈಕೆಯನ್ನು ವಿವಾಹವಾಗುವಾಗ ಈ ರಾಯರು ಹುಚ್ಚರಾಗಿರಲಿಲ್ಲವಾದರೂ ಅತಿಯಾಗಿ ಹೆಂಡವನ್ನು ಕುಡಿದಿರಬೇಕು; ಇಲ್ಲದಿದ್ದರೆ ಇವಳು ಹೆಂಡತಿಯೆನಿಸುವುದು ಅಸಂಭವನೀಯವೆನಿಸುತ್ತಿತ್ತು. ಅನಿಷ್ಟವು ಸಮೀಪಕ್ಕೆ ಸಾರುವಾಗ ಅದರ ಆಭಾಸವಾಗದಿರದಂತೆ. ಹಾಗೆಯೇ ಈಕೆಯನ್ನು ನೋಡಿದ ಕೂಡಲೇ ಏಕೋ ಎದೆಯು ಧಸಕ್ಕೆಂದಿತು. ಆಕೆಯ ಬಳಿಯಲ್ಲೆ ಸುಮಾರು ಏಳು ವಯಸ್ಸಿನ ಬಾಲಿಕೆಯೊಬ್ಬಳು. ಸುಂದರ ಮುಖ; ಆದರೆ, ತೀಕ್ಷ್ಣ ದೃಷ್ಟಿ! ತಾಯಿಯ ಸ್ಥೂಲ ಮೈಯಿಲ್ಲವಾದರೂ ಬಾಲಿಕೆಗೆ ಅಪರಂಪರಾಗತ ದೃಷ್ಟಿ!

ನಾನು ಜಗಲಿಯನ್ನು ಹತ್ತುವಾಗ ಯಾರೂ ಕಾಣಿಸಲಿಲ್ಲ. ಸಂಕೋಚಪಡುತ್ತ ಮನೆಯೊಳಗೆ ಕಾಲಿಡುವೆನೆನ್ನಲು 'ಹ್ಞಾ, ನೀನೇ? ಬಂದಿಯಾ?' ಎಂದ ಹಾಗಾಯಿತು. ಆಶ್ಚರ್ಯದಿಂದ ಬಲಕ್ಕೆ ತಿರುಗಿ ನೋಡಲು.—ಏನಾಶ್ಚರ್ಯ! ನಾನು ಹಾಸಿಗೆಯ ಕಟ್ಟೆಂದು ಎಣಿಸಿದುದು ಈಕೆ—ಸರೋಜಮ್ಮ! 'ನಂಬಲಾಗದು ಸ್ತ್ರೀಯರ' ಎಂದಿರುವುದಲ್ಲ,—ನೋಡಿ, ಇಷ್ಟರ ತನಕವೂ ನಂಬಲೇ ಬಾರದು! ಹೆಂಗಸು ನಿಮ್ಮ ಮುಂದೆಯೇ ಇರುವಳಾದರೂ ನಿಮಗೆ ಕಾಣಿಸಲೊಲ್ಲಳು!—ಇನ್ನು, ಹೇಗೆ ನಂಬುವಿರಂತೆ?

'ಅಹುದು, ನಾನು!' ಎನ್ನುತ್ತ, ಅವಳ ಸೌಂದರ್ಯರಾಶಿಯನ್ನು ನೋಡುತ್ತ ಬೆಪ್ಪಾದೆ.

ಬಹು ಸ್ಥೂಲ ದೇಹ. ಭಾರವೆಷ್ಟೆಂದು ಚಾಣಾಕ್ಷರು ಅಂದಾಜಿನಿಂದಲೇ ನುಡಿಯಬೇಕಲ್ಲದೆ ಸಾಮಾನ್ಯ ತಕ್ಕಡಿಯ ಬಳಿಗೊಯ್ದರೆ, ಮೇಲಕ್ಕೇರುವ ಮೊದಲೇ ದಿಗಿಲುಪಟ್ಟೇ ತಕ್ಕಡಿಯು ತಟ್ಟನೆ ಕಡಿದುಹೋಗದಿರದು. ಚಂದ್ರಪ್ರಭೆ, ಶಕುಂತಳೆ, ಪದ್ಮಿನಿ, ಇವರಾರೊಡನೆಯಾದರೂ ಹೋಲಿಸುವೆನೆಂದರೆ ಉಪಾಯವಿಲ್ಲ. ಸುಂದರಿಯಲ್ಲವೆನ್ನಹೋದರೆ, ಅದೂ ಅನ್ಯಾಯ. ಬೆಳ್ಳಗಿನ ದೇಹ, ಸ್ಥೂಲ; ತೀಕ್ಷ್ಣ ದೃಷ್ಟಿ; ದುಂಡಗಿನ ಕೈ; ಬಲು ಕೋಮಲವಾದ ಸ್ವರ. ಇಂತಹ ದೇಹಕ್ಕೆ ತೀಕ್ಷ್ಣ ದೃಷ್ಟಿಯಿರುವುದು ಆಶ್ಚರ್ಯವೇ!

ಕುಳಿತುಕೊಳ್ಳಲು ಹೇಳಲಿಲ್ಲ. ಅಡಿಗೆಯವನನ್ನು ಹಾಗೂ ಸನ್ಮಾನಿಸಬಹುದೇ?

'ನಿನ್ನ ಹೆಸರು?' ಎಂದು ಪ್ರಶ್ನೆ.

ಇದೀಗ ದೊಡ್ಡ ಸಮಸ್ಯೆ. "ಚರ್ಮುರಿ" ಎನ್ನಲು ಮನಸ್ಸಿಲ್ಲ. ಅದು . . . ಅದೇನೋ, ಧೈರ್ಯವೂ ಇಲ್ಲ. ಒಂದು ಹೆಸರು ಹೊಳೆಯಿತು. ಕಾದಂಬರಿಯಲ್ಲೋದಿದ್ದೆ. 'ಪ್ರಕಾಶಚಂದ್ರ ರಾವ್!' ಎಂದೆ.

'ಪ್ರಕಾಶ—ಚಂದ್ರ—ರಾವ್!—?—!—?' ಎಂದಳು ಸರೋಜಮ್ಮ. ಆ ದೃಷ್ಟಿ!.

'ಲ್! ಚರ್ಮುರಿ!' ಎಂದೆ.

'ಎಲ್ಲಿದೆ ಚರ್ಮುರಿ?' ಎಂದು ಆಶ್ಚರ್ಯದಿಂದ ಕೇಳಿದಳು.

'ಇಲ್ಲೇ, ನಾನೇ!' ಎಂದೆ.

ಕೇಳಿ, ಯಜಮಾನಿಗೇನಾಗಬೇಡ! ವಿಸ್ಮಯಪಟ್ಟಳೊ, ದಿಗಿಲುಪಟ್ಟಳೊ, ಏನೋ ಒಂದು. 'ಚರ್ಮುರಿ? ಚರ್ಮುರಿ? ಎಂಥ ಚರ್ಮುರಿ? ಯಾವ ಚರ್ಮುರಿ?' ಎಂದು ಅಮ್ಮನವರ ಪ್ರಶ್ನೆ.

'ಇಂತಹ ಚರ್ಮುರಿ, ಈ ಚರ್ಮುರಿ! ನಾನೇ ಚರ್ಮುರಿ!' ಎಂದೆ.

ಈಗ ನಿಜವಾಗಿ ದಿಗಿಲುಪಟ್ಟಳು. ಪ್ರಕಾಶಚಂದ್ರರಾವ್ ಎಂದವನು ನಿಮಿಷಾರ್ಧದಲ್ಲಿ ತಾನು ಚರ್ಮುರಿ ಎಂದುಕೊಳ್ಳುವಾಗ – ಅವನ ವಿಷಯದಲ್ಲಿ ನಿಮ್ಮ ಭಾವನೆ ಹೇಗಾಗದು?

ಅಷ್ಟರಲ್ಲೇ ಅಮ್ಮನಿಗೇನೋ ಹೊಳೆದಿರಬೇಕು. ಮತ್ತೊಂದು ಕುರ್ಚಿಯಲ್ಲಿ ಮೌನವಾಗಿ ಕುಳಿತು ನನ್ನನ್ನೇ ದಿಟ್ಟಿಸುತ್ತಿರುವ ಚಿಕ್ಕ ಬಾಲಕಿಯನ್ನು ಕುರಿತು, 'ಲೀಲೂ! ಒಳಗೆ, ಅಪ್ಪನ ಮೇಜಿನಲ್ಲಿ ಕೆಂಪಗಿನ ಒಂದು ಕಾಗದವಿರುವುದಮ್ಮ, ಹೋಗಿ ತಾ!' ಎಂದಳು. ಚಿಕ್ಕ ಸರೋಜಮ್ಮನು ಓಡಿಹೋಗಿ ತಂದಳು. ದೊಡ್ಡ ಸರೋಜಮ್ಮಓದಿದಳು. ಆ ಮೇಲೆ ನನ್ನನ್ನು ನೋಡಿ, 'ನಿನ್ನ ಹಿಂದಿನ ಯಜಮಾನರು ಬರೆದುದು ಸರಿ, ಅಲ್ಲವೇ? ನಿನ್ನ ಹೆಸರು ಚರ್ಮುರಿ! ಆದರೆ, ಮೊದಲು ನೀನು ಪ್ರಕಾಶಚಂದ್ರನೆಂದೆಯಲ್ಲ,—ಅದೇಕೆ?' ಎಂದು ಪ್ರಶ್ನಿಸಿದಳು.

ಏನು ಹೇಳಲಿ? 'ಅದು ನನ್ನ ನಿಜ ಹೆಸರಮ್ಮ. ಬಹು ಕಾಲದಿಂದ ರೂಢಿಯಲ್ಲಿಲ್ಲದೆ ಮರೆತುಹೋಗಿತ್ತು. ಚರ್ಮುರಿಉಂಡೆಯನ್ನು ಮಾರುತ್ತಿದ್ದೆ. ಮಾರುತ್ತಾ ಮಾರುತ್ತಾ ನಾನೇ ಚರ್ಮುರಿಯಾದೆ!' ಎಂದು ದೈನ್ಯದಿಂದ ಸೂಚಿಸಿದೆ.

'ಹಂ! ಒಳಗೆ ಹೋಗಿ, ವಸ್ತ್ರಗಳನ್ನು ತೆಗೆದಿಟ್ಟು ಒಲೆಗೆ ಬೆಂಕಿ ಹಾಕಿ, ಬೇಳೆಯನ್ನು ಬೇಯಿಸಲಿಟ್ಟು, ಪಲ್ಯಕ್ಕೆ ಬೇಂಡೆಯನ್ನು ಕಡಿದು, ಸಿದ್ಧಪಡಿಸು!' ಎಂದು ಆಜ್ಞೆಯಾಯಿತು.

ಒಳಗೆ ಹೋದೆ. ಯಾವ ಕೊಠಡಿಗೆ ಹೋಗಿ ನನ್ನ ವಸ್ತ್ರಗಳನ್ನು ತೆಗೆದಿಡಲೆಂದು ಸೂಚನೆಯಾಗಲಿಲ್ಲ. ನೆಟ್ಟಗೆ ಅಡಿಗೆ ಕೋಣೆಗೆ ಹೋಗಿ ಅಲ್ಲೇ ಬಾಗಲಿಗೆ ತೂಗಹಾಕಿ ಸಿದ್ಧನಾದೆ. ಅಷ್ಟರಲ್ಲೇ ರಾಣಿಯ ಮೂರ್ತಿಯು 'ತೇಲಿಕೊಂಡು' ಬಂತು. ಬೇಳೆ, ಮೆಣಸು, ಅಕ್ಕಿ, ಸಾಸಿವೆ, ಎಣ್ಣೆ, ಉಪ್ಪು, ಬೇಂಡೆ, ಕತ್ತಿ ಎಲ್ಲವಿರುವ ಸ್ಥಳದ ಪರಿಚಯವಾಯಿತು. ೧೨ ಘಂಟೆಯೊಳಗೆ ಅಡಿಗೆ ಸಿದ್ಧ

ಕೆಮ್ಮುತ್ತ ರಾಯರು ಬಂದರು. ಮಣೆಯ ಮುಂದೆ ಕುಳಿತರು. ರಾಣಿಯವರು ಎದುರಲ್ಲಿ ಕುಳಿತು, ಬಡಿಸುವ ಕ್ರಮವನ್ನು ನನಗೆ ತಿಳಿಸಿದರು. ಬಳಿಯಲ್ಲೇ ಚಿಕ್ಕ ಸರೋಜಮ್ಮನ (ಲೀಲೆಯ) ಮೂರ್ತಿಯು ಉಪಸ್ಥಿತವಾಯಿತು. ರಾಯರ ಊಟ ಒಟ್ಟು ಎರಡೂವರೆ ತೊಲೆ ಅನ್ನ, ಅರ್ಧ ತೊಲೆ ಪಲ್ಯ, ಇಷ್ಟರೊಳಗೆ ಮುಗಿಯಿತು. ಚಿಕ್ಕ ಸರೋಜಳು ಮಡಿಕೆಯನ್ನು ಅರ್ಧಕ್ಕಿಳಿಸಿ ಒಂದಿಷ್ಟೂ ಆಯಾಸವಿಲ್ಲದೆ ಎದ್ದು ಹೋದಳು. ಉಳಿದರ್ಧದಲ್ಲಿ ಅರ್ಧವನ್ನು ದೊಡ್ಡ ಸರೋಜಳುಂಡು ಎರಡು ತಟ್ಟೆ ಮಜ್ಜಿಗೆ ಕುಡಿದು, 'ಈ ದಿನ ಹಸಿವೇ ಇಲ್ಲ'ವೆಂದು ಊಟವಾದ ಕೂಡಲೆ ಹೇಳಿ, ಎದ್ದರು. ಇನ್ನುಳಿದ ಅನ್ನ ನನಗೆ . . . .

'ಚರ್ಮುರಿ!' ಎಂದಳು ಸರೋಜಮ್ಮ.

'ಏನು?' ಎಂದು ಕೇಳಿದೆ.

'ಕೆಲಸದವನನ್ನು ಊಟಕ್ಕೆ ಕರೆ!' ಎಂದಳು.

ಎದೆ ಸ್ತಬ್ಧ! ಕೆಲಸದವ!

'ಎಲ್ಲಿದ್ದಾನೆ? ಯಾರು?' ಎಂದು ಕೇಳಿದೆ.

'ಎಲ್ಲಪ್ಪ ಹೊರಗಿದ್ದಾನೆ' ಎಂದಳು.

ಜಗಲಿಗೆ ಹೋಗಿ ಒಂದು ಮೂಲೆಯಲ್ಲಿ ನಿಂತು, 'ಎಲ್ಲಪ್ಪಾ!' ಎಂದು ನಿರಾಶೆ—ರೋಷ—ದುಃಖಗಳಿಂದ ಕೂಗಿದೆ.

ಬಡಮ್ಮನೆ ನನ್ನ ಕಾಲಿನ ಕೆಳಗೆ ಒಂದು ವ್ಯಕ್ತಿಯು ಪ್ರತ್ಯಕ್ಷವಾಯಿತು. ಎಲ್ಲಪ್ಪ! ಎಲ್ಲಿಯೂ ಇಲ್ಲಪ್ಪ ಇಂತಹ ಬಡಪ್ರಾಣಿ! ಎರಡು ಮೊಳ ಉದ್ದದ ಒಂದು ಮೀನಿನ ಮೂಳೆಯನ್ನು ತಂದು ಒಂದು ಮಸ್ಲಿನ್ ವಸ್ತ್ರದಲ್ಲಿ ಸುತ್ತಿ, ತುದಿಯಲ್ಲೆರಡು ಕಪ್ಪು ಚುಕ್ಕಿಗಳನ್ನಿಟ್ಟರೆ,–ಎಲ್ಲಪ್ಪ!

'ಊಟಕ್ಕೆ?' ಎಂದು ಪ್ರಶ್ನಿಸಿದನು.

'ಅಹುದು, ಊಟಕ್ಕೆ!' ಎಂದೆ. ನನ್ನ ಅನ್ನದ ಪಾಲಿಗೆ ಎಲ್ಲಪ್ಪನೆಂಬವನೊಬ್ಬನಿರುವನೆಂಬ ಕೋಪವೆಲ್ಲ ಮಾಯವಾಗಿ, ಕನಿಕರ ಹುಟ್ಟಿತು. ಮೆಲ್ಲನೆ ಬಗ್ಗಿ 'ಎಲ್ಲಪ್ಪ! ನಿನಗೆ ಕಾಹಿಲೆಯೇ?' ಎಂದು ಮೆಲ್ಲನೆ, ನಯವಾಗಿ ಕೇಳಿದೆ.

ಹ! ಆ ನಗು! ಇಂತಹ ಎಲ್ಲಪ್ಪನು ಇಷ್ಟು ವಿಕಾರನಾಗಿ ನಗಬಲ್ಲನೆಂದು ನಾನು ಪ್ರತೀಕ್ಷಿಸಿರಲಿಲ್ಲ. ಅಷ್ಟೆಯೇನು?

'ಏನು, ನನ್ನ ಕೃಶದೇಹವನ್ನು ನೋಡಿ ನಿಮ್ಮ ಪ್ರಶ್ನೆಯೇ? ಹಹ! ಇನ್ನೆರಡು ದಿನಗಳಲ್ಲಿ ನೀವೆಷ್ಟು ಬೆಳೆವಿರೆಂಬುದನ್ನು ನೋಡಲಿಕ್ಕಿದೆ!' ಎಂದನು.

ಮೈಮೇಲೆ ತಣ್ಣೀರು ಹೊಯ್ದಂತಾಯಿತು.

ಎಲ್ಲಪ್ಪನಿಗೆ ಅಮ್ಮನೇ ಬಡಿಸಿದಳು. ಉಳಿದನ್ನವನ್ನು, ಹಸಿದು ಹುಲಿಯಾದ ನಾನುಂಡೆ. ಸೌಟಿನಿಂದ ಮಡಕೆಯ ಕಲಾಯಿಯನ್ನೂ, ಲೋಹವನ್ನೂ ಕೆರೆದು ತಿನ್ನುವುದು ಸಾಧ್ಯವಾದರೆ ಅಷ್ಟಕ್ಕೂ ಹಿಂಜರಿಯುತ್ತಿದ್ದಿಲ್ಲ. ನನ್ನ ಅಡಿಗೆ ಕಾರಭಾರಿನ ಜೀವನದಲ್ಲಿ ನಾನು ಅನ್ನದ ರುಚಿಯನ್ನು ಚೆನ್ನಾಗಿ ಅರಿತುದು ಇಂದೇ; ಹಸಿವೆಂಬುದರ ವಿರಾಟಸ್ವರೂಪವನ್ನು ಕಂಡುದೂ ಇಂದೇ.

ಮಧ್ಯಾಹ್ನ ನಂತರ ಯೋಚನೆಗಿಟ್ಟಿತು. ಸರೋಜಮ್ಮನ ಮನೆಯಲ್ಲಿ (ಮನೆ ಕೂರ್ಮರಾಯರದಾದರೂ ಯಜಮಾನಿ ಸರೋಜಮ್ಮ!) ಹೇಗೆ ಕಾಲ ಕಳೆಯಲಿ? ಎಂದು. ಎಲ್ಲಪ್ಪನಿಗೆ ಕಾಹಿಲೆಯಲ್ಲ; ಈಗ ನನಗೂ ಕಾಹಿಲೆಯಿಲ್ಲ ಆದರೆ, ಇನ್ನೊಂದು ತಿಂಗಳು ಇಲ್ಲಿ ಉಳಿದರೆ, ಸರೋಜಮ್ಮನ ಮಿತವ್ಯಯದಲ್ಲಿ ನಾನು ಕ್ಷಯಿಸದಿರುವುದೂ ಇಲ್ಲ. 'ಅರ್ಧ ಸೇರು ಅಕ್ಕಿ!' ಎಂದು ಅಮ್ಮನ ಆಜ್ಞೆ. ಅದಕ್ಕೊಂದು ಪಾವು ಕೂಡಿಸುವುದು ಅಸಾಧ್ಯ! ಹಿಂದಿನ ರಾಯರು (ಅವರನ್ನು ದೇವರು ಪುನಃ ಉದ್ಧರಿಸಲಿ!) ಆಗಲಿ, ಅವರ ಪತ್ನಿಯಾಗಲಿ, ಎಂದೂ ಅಕ್ಕಿಯ ಅಳತೆಯನ್ನು ನನಗೆ ತಿಳಿಸಿರಲಿಲ್ಲ. ಅನ್ನ ಬೇಯಿಸುವವನೂ ಹೊಟ್ಟೆ ತುಂಬಾ ಊಟ ಮಾಡಲಾಗದಂತಹ ಮನೆಗಳಿರುವುವೇ?

ಸಾಯಂಕಾಲ ಕಾಫಿ ಫಲಾಹಾರ! ಅದೂ ಹಾಗೆಯೇ! ಕಾಫಿಯನ್ನು ನನ್ನಿಂದ ಮಾಡಿಸಿ, ತಿಂಡಿಯನ್ನು ಸಿದ್ಧಪಡಿಸಿದ ಮೇಲೆ ಅಮ್ಮನೇ ಪಾತ್ರೆಯ ಬಳಿ ಕುಳಿತಳು.

**ದುಡುಕಿನಲ್ಲಿ ಆಡಿದ ಮಾತನ್ನು ಶಾಂತಿಯಲ್ಲಿ ಆಲೋಚಿಸು.**

ಒಂದು ಚಿಕ್ಕ ಗುಬ್ಬಿಗೆ ಸಾಲುವಷ್ಟು ನನ್ನ ಪಾಲಿಗೆ ಬಂತು. ದೇವರು ನನ್ನನ್ನು ತಟ್ಟನೆ ಒಂದು ಗುಬ್ಬಿಯನ್ನಾಗಿ ಮಾರ್ಪಡಿಸಿದರೆ ತೃಪ್ತಿಪಡುತ್ತಿದ್ದೆ ಎಂದಂದುಕೊಂಡೆ ಆದರೆ, ಆದೇ ದಾವಾಶಾಯದಲ್ಲಿ ಈ ಅಮ್ಮನು ಗುಬ್ಬಿಯಂತಹ ಮನುಷ್ಯನಿಗೆ ಗುರುಗುಂಜಿ ತೂಕದಷ್ಟನ್ನೇ ಕೊಡುತ್ತಿದ್ದಳೆಂದೂ ನೆನಸಿದೆ.

ಕಾಫಿ ಕುಡಿದೆದ್ದು, ರಾತ್ರೆಯ ಅಡಿಗೆಗೆ ಸಿದ್ಧಪಡಿಸಲು ತೊಗರಿ ಬೇಳೆಯನ್ನು ತೆಗೆದೆ.

"ಕೌನ್ಪುರ ಬೇಳೆಯಲ್ಲವೇ, ಚರ್ಮುರಿ?—ಈ ಸಾರಿ ಒಳ್ಳೆಯ ಬೇಳೆಯೇ ಬರಲಿಲ್ಲ!" ಎಂದಳು ಸರೋಜಮ್ಮ.

'ಕೌನ್ಪುರ ಅಮ್ಮಾ, ತಾಜಾ ಕೌನ್ಪುರ! ಮಧ್ಯಾಹ್ನ ಮಾಡಿದ ತೊವ್ವೆ ಬಹಳ ರುಚಿಯಾಗಿತ್ತು!' ಎಂದೆ.

'ಕೌನ್ಪುರವೆಂದರೇನಮ್ಮಾ?' ಎಂದು ಚಿಕ್ಕ ಸರೋಜಮ್ಮನು, ಮುದ್ದು ಮುದ್ದಾಗಿ, ವೈಯ್ಯಾರದಿಂದ, ರಾಗದಿಂದ, ಕೇಳಿದಳು.

'ಕೌನ್ಪುರ ಎಂದರೆ ಒಂದು ಊರು ಮಗು; ಮೈಸೂರಿನ ಸಮೀಪ!' ಎಂದಳು ದೊಡ್ಡ ಸರೋಜಮ್ಮ.

'ಎಷ್ಟು ದೂರ ಅಮ್ಮಾ?' ಎಂದು ಪುನಃ ಬಾಲಿಕೆಯ ಪ್ರಶ್ನೆ.

'ಮೂರುವರೆ ಮೈಲು!' ಎಂದು ಅಮ್ಮನ ಉತ್ತರ.

ಬೆಪ್ಪಾದೆ. ಸರೋಜಮ್ಮನು ಗಾತ್ರದಲ್ಲಿ ಮಾತ್ರವಲ್ಲ, ಭೂಗೋಳಶಾಸ್ತ್ರದಲ್ಲೂ ದೊಡ್ಡವಳು! ತೊಗರಿ ಬೇಳೆಯ ತವರುಮನೆಯ ಹೆಸರೂ, ಅಂತರವೂ, ಗೊತ್ತಿದೆ!

ಅಕ್ಕಿಯನ್ನು ತೆಗೆದೆ.. ಮುಸ್ಕತಿ! ಅಮ್ಮನೊಡನೆ ಮಾತಾಡೋಣವೆನಿಸಿತು. ಹೊಟ್ಟೆ ತುಂಬ ಮಾತಾಡಿದರೆ ಹಸಿವು ಕಡಿಮೆಯಾದೀತೆಂದು. 'ಒಳ್ಳೆ ಅಕ್ಕಿಯಮ್ಮಾ; ಬಹಳ ಒಳ್ಳೆ ಅಕ್ಕಿ. ಮುಡಿಗೆ ಎಂಟು ರೂಪಾಯಿ ಇರಬಹುದು' ಎಂದೆ.

'ಅಲ್ಲ, ಆರುವರೆಗೆ ದೊರೆಯಿತು, ನಮ್ಮ ಲೆಕ್ಕದ ಅಂಗಡಿಯಿಂದ. ನಮಗೆ ಅವರು ಯಾವಾಗಲೂ ಒಳ್ಳೆ ಮಾಲನ್ನೆ ಬಹಳ ಕಡಿಮೆ ಬೆಲೆಗೆ ಕೊಡುತ್ತಾರೆ.'

'ಬಹು ಒಳ್ಳೆ ಅಕ್ಕಿಯಮ್ಮಾ, ದೇಹಕ್ಕೂ ಒಳ್ಳೆಯದು. ಇದರಿಂದ ಅಜೀರ್ಣವೆಂಬುದಿಲ್ಲ: ಕೊಬ್ಬು ಬೆಳೆಯುವುದಿಲ್ಲ; ಊಟಮಾಡಿದಷ್ಟು ಸಾಕಾಗದು; ಇನ್ನೆರಡು ತುತ್ತು ಬೇಕೆಂದೇ ಎನಿಸುವುದು! ಬಹು ಒಳ್ಳೆ ಅಕ್ಕಿ!' ಎಂದೆ.

ಅಮ್ಮನಿಗೆ ಸಂದೇಹ ತೋರಿತು! ನಾನು ಹೆಚ್ಚು ಉಣಬಹುದೆಂದೋ, ವ್ಯಂಗವಾಗಿ ಪರಿಹಾಸಮಾಡುವೆನೆಂದೋ ಏನೋ ಹೊಳೆಯಿತೆಂದೋ ತೋರುವುದು. ಆದರೂ ನನಗೆ ಉತ್ತರಕೊಡಲಿಲ್ಲ.

× × × × ×

ಹೊಳಪಿನ ಮೈಗೆ ವಜ್ರದ ಬೆಂಡೋಲೆಗಳು, ಮತ್ತೂ ಹೊಳೆದು ಪ್ರಕಾಶವನ್ನು ಹೆಚ್ಚಿಸಿವೆ. ಹೃದಯವೂ ಸ್ವಾರ್ಥ—ಕೃಪಣತನ—ಮತ್ಸರಗಳ ಕೃಷ್ಣಛಾಯೆಯಿಂದ ಮುಸುಕಾಗಿರದಿದ್ದರೆ ಬಹಿರ್ಕಾಂತಿಯು ಮನುಷ್ಯನಿಗೆ ಹೇಗೆ ಒಪ್ಪುವುದು?

× × × × ×

ಇದೆಲ್ಲ ನಡೆದುದು ರಾತ್ರೆ. ಊಟ ತೀರಿಸಿದರೂ ಹಸಿವು ಅಡಗದೆ ನನಗೆ ನಿದ್ದೆ ಬಾರದಾಯಿತು. ಸಾವಿರ ಭೀಕರ ಚಿತ್ರಗಳು ಮನಸ್ಸಿನಲ್ಲಿ ಮೂಡಿ, ನಿಮಿಷ ನಿಮಿಷಕ್ಕೂ ಭೀಕರತೆಯನ್ನು ಹೆಚ್ಚಿಸಿ ವಿಕಟ ನರ್ತನ ಮಾಡಿದುವು. ಸರೋಜಮ್ಮ! ಆಕೆ ನನಗೆ ಚಿತ್ರಹಿಂಸೆಯನ್ನು ಕೊಟ್ಟರೂ ಸಹಿಸಬಲ್ಲೆ; ಆದರೆ, ಹಸಿವು! ಅದು ನನಗೆ ತಿಳಿದಿರಲಿಲ್ಲ. ಈ ಅಮ್ಮನಿಂದ . . ; . . . .

ಚಾಪೆಯಿಂದ ಎದ್ದು ಕುಳಿತುಕೊಂಡೆನು. ನನ್ನ ವಸ್ತ್ರಗಳೆಲ್ಲವೂ ಅಡಿಗೆ ಕೋಣೆಯಲ್ಲಿ ಇದ್ದುವು. ಅಮ್ಮನವರಲ್ಲಿ ಒಂದು ದಿನದ ಸೇವೆ ಸಲ್ಲಿಸಿದುದಾಗಿದೆ. ಇನ್ನು, ಹೇಳದೆ ಪಲಾಯನಮಾಡಿದರೆ ಅನ್ಯಾಯವಾಗದೆಂದೂ ಹೊಳೆದಿದೆ. ಒಂದು ಚಿಕ್ಕ "ಕಕ್ಕಡ"ವನ್ನು ಹತ್ತಿಸಿ, ಅಡಿಗೆಕೋಣೆಯ ಬಳಿಗೆ ಹೊರಟೆ. ಒಂದು ಕೊಠಡಿಯನ್ನು ದಾಟಿ ಜಗಲಿ; ಸುಮಾರು ಹತ್ತು ಅಡಿ ಉದ್ದವಿರಬಹುದು. ಅಲ್ಲಿಂದ ಎರಡು ಕೊಠಡಿಗಳಿಗೆ ಬಾಗಿಲು. ಒಂದರಲ್ಲಿ ರಾಯರ ಗ್ರಂಥಾಲಯ; ಮತ್ತೊಂದು ರಾಣಿಯ ಅಂತಃಪುರ; ಆ ಜಗಲಿಯು ಮತ್ತೊಂದು ಸಂಕುಚಿತವಾದ ಜಗಲಿಗೆ ಮುಟ್ಟುವುದು. ಆ ಎರಡನೆ ಜಗಲಿಯಲ್ಲಿ ಉಗ್ರಾಣ; ಅಡಿಗೆಕೋಣೆ, ಅಲ್ಲೀಗ ನಾನು ಹೊರಟುದು.

ದೊಡ್ಡ ಜಗಲಿಯಲ್ಲಿ ಕಾಲಿಟ್ಟಾಗಲೇ, ಅಂತಃಪುರದಲ್ಲಿ ಗುಜುಗುಜು ಕೇಳಿಸಿತು. ರಾಯ-ರಾಣಿಯರಿನ್ನೂ ನಿದ್ದೆಹೋಗಿಲ್ಲವೆಂದು ತಿಳಿಯಿತು. ಕುತೂಹಲವಯ್ಯಾ, ಬರೇ ಕುತೂಹಲ; ಎಂದೇ ಬಾಗಿಲಿಗೆ ಕಿವಿಕೊಟ್ಟೆ. ಆದರೆ, ಏನು ಹೇಳಲಿ? ಆ ಮಾತುಗಳನ್ನು! ರಾಣಿಯವರು ಹೇಳುತ್ತಾರೆ— "ನನಗೆ ಮೊದಲೇ, ಆತನನ್ನು ಕಂಡಾಕ್ಷಣವೇ ತಿಳಿದಿತ್ತು. ಆತನು ಹಾಗೆ ಹೇಳಿದ ಮೇಲೆ ನನ್ನ ಸಂಶಯವು ನಿಜವೆಂದು ಖಚಿತವಾಯಿತು!"

ರಾಯರು ಹೇಳುತ್ತಾರೆ:—"ಯಾವ ಸಂಶಯ? ಅವನು ಹೇಳಿದುದೇನು?"

ರಾಣಿ:—"ನಿನ್ನ ಹೆಸರೇನು ಎಂದಾಗ ಪ್ರಕಾಶಚಂದ್ರನೆಂದುಬಿಟ್ಟ! ಬರೇ ಚಂದ್ರನೇ? ಚಂದ್ರನ ಮೇಲೆ ರಾವನ್ನೂ ಕೂಡಿಸಿದ್ದಾನೆ! ಮರುಕ್ಷಣವೇ ಚರ್ಮುರಿ ಎಂದ. ಇವನೇನು ಮದ್ಯಪಾನ ಮಾಡಿರುವನೇ ಹುಚ್ಚನೇ ಎಂದು ಮೊದಲು ಭಯದಿಂದ ರೋಮಾಂಚನವಾಯಿತು. ಮತ್ತೆ, ಬರೇ ಸುಳ್ಳು ಮಾತಾಡಿರುವನೆಂದು ಖಚಿತಗೊಂಡೆ?"

ರಾಯರು:—"ಇರಲಿ, ಕೆಲದಿನಗಳಲ್ಲಿ ಕಳ್ಳನೋ ಪ್ರಾಮಾಣಿಕನೊ ಗೊತ್ತಾಗುವುದು."

ರಾಣಿ:—ನನ್ನ ಅಡ್ಡಿಯೇನೂ ಇಲ್ಲ. ಆದರೆ ಲೀಲೂವಿನ ಒಡವೆಗಳನ್ನು ತ್ರಿಜರಿಯೊಳಗಿಡಲೇ ಬೇಕು. ಇವನ ಸತ್ಯಪರೀಕ್ಷೆಗೆ ಹೋಗಿ ಇದ್ದುದೆಲ್ಲ ಹೋದೀತು. ಪ್ರಾಮಾಣಿಕನಾದರೆ ಎರಡು ತುತ್ತು ಅನ್ನ ತಿಂದು ಇದ್ದಾನು.

ರಾಯ:—ಸರಿ.

ರಾಣಿ:—ಆದರೆ, ಎಲ್ಲರೂ ನಮ್ಮದನ್ನೇ ತಿಂದು ಹೋದರೇ ವಿನಾ . . . .

ರಾಯ:—ಸರಿ, ಸರಿ.

ರಾಣಿ:—ಆ ಗುಂಡಕ್ಕ . . . . .

ರಾಯ:—ಅಹುದು, ಅಹುದು.

ರಾಣಿ:—ದಿನಕ್ಕರ್ಧ ಸೇರು ಬೆಣ್ಣೆಯನ್ನು ಕದ್ದು ತಿನ್ನುವ ಆ ನರ್ಸ . . .

ರಾಯ:—ಹುಂ! ಸಾಕು. ಹೋಗಲಿ.

ರಾಣಿ:—ಮತ್ತೆ, ಆ ಸೇಸಕ್ಕನ ಮೊಮ್ಮಗ . . . .

ನನ್ನ ಪಲಾಯನಕ್ಕೆ ಇದಕ್ಕಿಂತಲೂ ಹೆಚ್ಚಿನ ಉತ್ತೇಜನ ಬೇಕೇ?

ರಾಣಿ:—ಆದರೆ, ಇವನಿಗೆ ಸಂಬಳ . . . .

ರಾಯ:—ಹತ್ತು ರೂಪಾಯಿ, ಆಗದೇ?

ರಾಣಿ:—ಹತ್ತು? ಹತ್ತು? ಅಟ್ಟಕ್ಕೆ? ದಿನಕ್ಕೆರಡು ಊಟ? ಎರಡು ಬಾರಿ ಕಾಫಿ, ಮಲಗುವ ಸ್ಥಳ, ಆ ಮೇಲೆ ತಿಂಗಳಿಗೆ ಹತ್ತು?

"ಹತ್ತು! ಬೆಂಕಿ ಹತ್ತಲಿ!" ಎನ್ನಬೇಕೆಂದಿದ್ದೆ. ಅಷ್ಟರಲ್ಲಿ ನನ್ನ ಕಾಲ ಬಳಿಯಲ್ಲಿ ಬೆಚ್ಚಗೆ ಕಂಡಿತು. ಬಲಪಾರ್ಶ್ವದಲ್ಲಿ ಜಗಲಿಗೆ ಮಡಲುಗಳನ್ನು ಅಡ್ಡವಾಗಿ ಕಟ್ಟಿದ್ದರು. ಅಯ್ಯೋ, ಭಯಂಕರ! ಬೆಂಕಿ ಹತ್ತಿದೆ! ನನ್ನ ಮೈಮೇಲಿನ ಶಾಲನ್ನು ತೆಗೆದು ಅದಕ್ಕೆ ಹೊಡೆದೆ. ಕೋಪದಿಂದ ಸರ್ಪವು ಬುಸುಗುಟ್ಟುವಂತೆ ಸುಯ್ ಸುಯ್ ಎಂದಿತು ಬೆಂಕಿ. ಉಜ್ವಲಿಸಿತು. "ಅಯ್ಯೋ, ಬೆಂಕಿ!" ಎಂದು ಅಡಿಗೆ ಕೋಣೆಗೆ ಓಡಿ, ನನ್ನ ಗಂಟನ್ನು ಹಿಡಿದೆತ್ತಿಕೊಂಡೆ.

ನಿಮಿಷಾರ್ಧದಲ್ಲಿ ನೂರಾರು ಜನರು ಕೂಡಿದರು. ಕೂರ್ಮರಾಯರು ಮೂರು ಫರ್ಲಾಂಗು ದೂರಕ್ಕೆ ಓಡಿ, ಕೆಮ್ಮಲಾರಂಭಿಸಿದರು. ದೊಡ್ಡ ಸರೋಜಮ್ಮನು ಚಿಕ್ಕ ಸರೋಜಮ್ಮನನ್ನು ಹೊರಲಾರದೆ, ಕೈಯಿಂದಲೇ ದರದರನೆ ಒಂದು ಫರ್ಲಾಂಗು ದೂರಕ್ಕೆಳೆದೊಯ್ದು, "ಆ ಪೆಟ್ಟಿಗೆ! ಆ ಭಂಗಾರ! ಆ ಸೀರೆ! ಆ ಗಡಿಗೆ!" ಎಂದು ಬೊಬ್ಬಿಡುತ್ತಿದ್ದಳು. ಒಳಗೂ ಹೊರಗೂ ಓಡ್ಯಾಡುವವರು ಕೆಲವರು. ಬಾವಿಯಿಂದ ನೀರೆತ್ತಿ ಅಡಿಗೆಕೋಣೆಯ ಮೇಲಕ್ಕೆ ಮಾತ್ರ (! ಎಂಥ ಭಾಗ್ಯ, ಅಡಿಗೆ ಕೋಣೆಯದು!) ಹೊಯ್ದು, "ರಾಮಾ! ಲಕ್ಷ್ಮಣಾ! ಕೊರಗಾ! ಧೂಮಾ! ವೆಂಕೂ!" ಎಂದು ಸಹಕಾರಿಗಳನ್ನು ಕೂಗಿ ಆಮಂತ್ರಿಸುವವರು ಕೆಲವರು. ಅರ್ಧ ತಾಸಿನೊಳಗೆ ಮನೆ ಭಸ್ಮ!

ಯಾರಿಗೂ ಬೇಡವಾದ ಎರಡು 'ಖಾಲಿ' ಪೆಟ್ಟಿಗೆಗಳು, ಕಾಲುಮುರಿದ ಒಂದು ಬೆಂಚು, ಅರ್ಧ ಸುಟ್ಟ ಐದು ಕುರ್ಚಿಗಳು, ಗಾಳಿ ಬಂದರೆ ಡೋಲಾಯಮಾನವಾಗುವ ಒಂದು ಸ್ಟಾಂಡು', ಭಸ್ಮವಾದ ಚಿಕ್ಕ ವಸ್ತ್ರಗಳು, ಇವಿಷ್ಟು 'ಕಾಪಾಡಲ್ಪಟ್ಟ' ವಸ್ತುಗಳು.

+ + + +

ಸುಟ್ಟುಳಿದ ಕುರ್ಚಿಯ ತುಂಡಿನ ಮೇಲೆ ಅಮ್ಮನು ಕುಳಿತು ದುಃಖದಿಂದ ಉಸುರ್ಗಳೆದು ಅಳುತ್ತಿದ್ದಳು.

"ಹೋಯಿತಮ್ಮಾ ಮನೆ, ಭಸ್ಮ!" ಎಂದೆ

"ಹೊಟ್ಟೆಯೂ ಭಸ್ಮವಾಗುತ್ತಿದೆ, ಮಾತಾಡಬೇಡ!" ಎಂದಳು.

"ಆ ಬೆಂಕಿ! ಅದು ಹೇಗಾಯಿತಮ್ಮಾ?" ಎಂದು ಪ್ರಶ್ನಿಸಿದೆ.

"ಪರಮಾತ್ಮನೇ ಬಲ್ಲ. ಒಲೆಯಲ್ಲಿನ ಕಟ್ಟಿಗೆಯನ್ನು ನೊಂದಿಸಿದ್ದಿಯೇ?"

"ನಾನು ಅಡಿಗೆ ಕೋಣೆಯಿಂದ ಹೊರಗೆ ಬರುವಾಗ ಬೂದಿಯೂ ತಣ್ಣಗಾಗಿತ್ತಮ್ಮ! –ಬೆಂಕಿಯೆಂದರೆ ಮಹಾ ಕೆಟ್ಟ ವಸ್ತು ಅಮ್ಮಾ!" ಎಂದೆ.

ಅಮ್ಮನು ಮೌನವಾಗಿದ್ದಳು.

"ಭಾರೀ ಬೆಂಕಿಯಮ್ಮ! ಭಾರೀ ಬೆಂಕಿ!—ಅಮ್ಮಾ, ಬೆಂಕಿಯೆಂದರೇನಮ್ಮಾ?" ಎಂದೆ.

ತಟ್ಟನೆ ತಲೆಯೆತ್ತಿ, "ನಡೆ, ಮುಟ್ಠಾಳ! ಬೆಂಕಿಕುಂಡದಲ್ಲಿ ದುಮುಕಿನೋಡು!" ಎಂದು ಅಮ್ಮನು ಹಲ್ಲುಕಚ್ಚಿ ನುಡಿದಳು.

ಬೆಪ್ಪಾದೆ. "ಸಂಬಳ ಬೇಡವಮ್ಮಾ! ನಾನೀಗಲೇ ತೆರಳುವೆನು!" ಎನ್ನುತ್ತ, ಕೌನ್ಪುರವು ಮೈಸೂರಿಗೆ ಮೂರು ಮೈಲು ದೂರವೆಂದು ನುಡಿದವಳಿಗೆ, ಬೆಂಕಿಯ ಮೂಲವು ತಿಳಿಯದಿದ್ದುದೊಂದು ಆಶ್ಚರ್ಯವೆಂದು ನಡೆದೆ.

"ಕಳ್ಳ—ಬೆಂಕಿ—ಕೊಳೆ" ಈ ಮೂರು ಶಬ್ಧಗಳಿಗೆ ಮೂರು ಬಗೆಯ ಭೀತಿದಾಯಕ ಅರ್ಥವಿದೆಯಂತೆ. ಇದರಲ್ಲಿ ಎರಡನೆಯದನ್ನು ಅನುಭವಪೂರ್ವಕವಾಗಿ ತಿಳಿದೆ. ಬೆಂಕಿಯ ದೃಶ್ಯವು ಭಯಾನಕ; ನಾವೇ ಮನೆಗೆ ಬೆಂಕಿಕೊಟ್ಟರೆ, ಆ ದೃಶ್ಯವನ್ನು ನೋಡಲು ನಿಂತರೆ, ಆ ಭೀಷಣ ಆನಂದವನ್ನು ಬೇರೆ ಹೇಳಬೇಕೆ?

+ + + +

ಯಾರು ಏನು ಹೇಳಿದರೂ, ಹಸಿವಿಗಿಂತ ದೊಡ್ಡ ಅನುಭವವಿಲ್ಲ; ಅಡಿಗೆಯವನೂ ಅರೆಹೊಟ್ಟೆಯಲ್ಲಿರಬೇಕಾದಂತಹ ಮನೆಗಿಂತ ದೊಡ್ಡ ನರಕವಿಲ್ಲ.

+ + + +

ಸರೋಜಮ್ಮನ ಮನೆ ಸುಟ್ಟುಹೋದುದರಲ್ಲಿ ನನಗೆ ಕನಿಕರವಿಲ್ಲ; ಇರುವುದಾದರೆ,—ಆ ಸುಟ್ಟು ಹೋದ ಭಾಗಕ್ಕಿಂತಲೂ ಹೆಚ್ಚು ಮಾಂಸವನ್ನು ಆಕೆ ಸೇವಕರಿಂದ ಕದ್ದಿರುವುದನ್ನು ಮುಂದೆ ಆಕೆಯ ಸೇವೆಗಾಗಿ ಬರುವ ಸೇವಕರಲ್ಲಾದರೂ ತುಂಬುವಂತಹ ಲಕ್ಷಣವಿಲ್ಲವಲ್ಲ!—ಎಂದು.

+ + + +

ಮಿತವ್ಯಯವು ಆವಶ್ಯಕ. ಆದರೆ, ಸೇವಕಜನರನ್ನು ಹೊಟ್ಟೆ ತುಂಬ ಉಣಿಸು; ಅತಿಥಿಗಳನ್ನು ಅರೆಹೊಟ್ಟೆಯಲ್ಲಿ ಕಳುಹದೆ, ತೃಪ್ತಿಪಡಿಸು, ಆ ಮೇಲೆ ಮಿತವ್ಯಯ.

**"ಬಡವರ ಬಂಧು"ವಿನ ಹೆಸರಿನಿಂದ ಯಾರಾದರೂ ಹಣ ವಸೂಲಿಗೆ ಬಂದರೆ, ಅಂತಹವರಿಂದ ಅಧಿಕೃತ ರಶೀದಿಯನ್ನು ಪಡೆಯಿರಿ!**

**ಮೆನೇಜರ, ಬ. ಬ.**

## ಗೀತಾ ಗ್ರಂಥ ಸ್ಪರ್ಧೆ.

**ಕರ್ಣಾಟಕದ ಸಮಸ್ತರಿಗೂ ಅನ್ವಯಿಸುತ್ತದೆ!**

ಬಡವರ ಬಾಳನ್ನು—ಕಷ್ಟಸುಖಗಳನ್ನು—ಸಂಸಾರವನ್ನು ಬಣ್ಣಿಸುವ—

೧. ಬೋಧಪ್ರದ ಕಥೆ

೨. ಉಚ್ಚ ಸ್ವತಂತ್ರ ಲೇಖ

೩. ಬಡಜನೋದ್ಧಾರಕರಾದ ಮಹದ್ವ್ಯಕ್ತಿಗಳ ಜೀವನ ಚರಿತ್ರೆ.

ಈ ಮೂರು ವಿಷಯಗಳಲ್ಲೊಂದನ್ನೆತ್ತಿ, 'ಬಡವರಬಂಧು'ವಿಗೆ ಇದೇ ಒಕ್ಟೋಬರ ತಾ. ೧೦ರೊಳಗೆ ಲೇಖನವನ್ನು ಬರೆದು ಕಳುಹಿಸುವ ಮಹನೀಯರಲ್ಲಿ ಯಾರ ಲೇಖನವು ಪ್ರಶಸ್ತವೆಂದು ಕಂಡುಬರುವುದೋ, ಅವರಿಗೆ, ಮೊದಲನೆಯ ಬಹುಮಾನವಾಗಿ, ಸಿಲ್ಕು ಬ್ಯಾಂಡಿನ ಹೊಸ ಮತ್ತು ಅಮೂಲ್ಯವಾದ ಶ್ರೀಮದ್ಭಗವದ್ಗೀತೆಯ ಪ್ರತಿಯೊಂದನ್ನೂ, ಆ ಲೇಖಕರ ಹೆಸರನ್ನು ಗಿಲ್ಟಿನಿಂದ ಅಚ್ಚು ಹಾಕಿಸಿ ೧೯೩೩ರ ಒಂದು ದೊಡ್ಡ ಡೈರಿಯನ್ನೂ ಸ್ಮರಣಾರ್ಥವಾಗಿ ಕೊಡುವೆವು. ಎರಡನೆಯ ಬಹುಮಾನವಾಗಿ "ಬಡವರ ಬಂಧು'ವನ್ನು ೨ ವರ್ಷಗಳ ತನಕವೂ, ಮೂರನೆಯ ಬಹುಮಾನವಾಗಿ ೧ ವರ್ಷದ ತನಕವೂ ಧರ್ಮಾರ್ಥವಾಗಿ ಕಳುಹಿಸುವೆವು.

ಅಗತ್ಯಸೂಚನೆ:—ಎಲ್ಲಾ ಲೇಖಗಳೂ 'ಬಡವರ ಬಂಧು'ವಿನ ಮೂರು ಪುಟಗಳನ್ನು ಮೀರಬಾರದು.

ಸ್ಪರ್ಧೆಗೆ ನಿಲ್ಲುವುದರಿಂದ ತಮ್ಮ ಗೌರವಕ್ಕೆ ಹಾನಿ ತಟ್ಟುತ್ತದೆಂದು ಭಾವಿಸದೆ, ಕನ್ನಡಭಿಜ್ಞರೆಲ್ಲರೂ ಈ ಸ್ಪರ್ಧೆಯಲ್ಲಿ ಭಾಗವಹಿಸಿ ನಮ್ಮನ್ನು ಪ್ರೋತ್ಸಾಹಿಸಬೇಕಾಗಿ ವಿನಯ ವಿನಂತಿ.

ಮೆನೇಜರ್, ಬ. ಬ.

## ಸ್ವೀಕಾರ ಮತ್ತು ವಿಮರ್ಶೆ.

ಮೂಲ್ಕಿಯ ಶ್ರೀ ದುರ್ಗಾದೇವಿ ಧರ್ಮಾರ್ಥ ರಾತ್ರಿ ಶಾಲೆಯ ೫ನೇ ವಾರ್ಷಿಕ ವರದಿಯು ನಮ್ಮ ಕೈಸೇರಿದೆ. ಇದು ವಿದ್ಯಾಭಿವೃದ್ಧಿಯ ವಿಷಯದಲ್ಲಿ ಅತ್ಯಂತ ಶ್ರೇಯಸ್ಕರ ಸಾಹಸವನ್ನೆಸಗಿದೆ. ಇದರ ಮೇಲ್ವಿಚಾರಕರ ಸಾಹಸವು 'ಅಭಿನಂದನೀಯವಿದೆ. ಆರ್ಥಿಕ ಸಂಕಷ್ಟಕ್ಕೊಳಗಾಗಿರುವ ಈ ಶಾಲೆಯು ಉತ್ತರೋತ್ತರಭಿವೃದ್ಧಿಯನ್ನು ಹೊಂದಲು ಸಾರ್ವಜನಿಕರು ಸಹಾಯವನ್ನೀಯಲಿ.

ಷಹಾ ಕಂಪೆನಿಯವರಿಂದ ಬಂದ ಕಾಮಿನಿಯಾ ಟರ್ಕಿಶ್ ಟ್ವೈಲೆಟ್ ಸಾಬೂನಿನ ಬಿಲ್ಲೆಯೊಂದನ್ನು ಆದರದಿಂದ ಸ್ವೀಕರಿಸುತ್ತೇವೆ. ಉಪಯೋಗದಲ್ಲಿ, ಇದು ಪೇಟೆಯಲ್ಲಿ ಸಿಗುವ ಕಡಿಮೆ ದರದ ಸ್ವದೇಶಿ ಸಾಬೂನುಗಳಲ್ಲಿ ಬಹು ಉತ್ತಮವೆಂದು ಕಂಡುಬಂದಿದೆ. ಸವೆಯುವುದೂ ಬಹು ನಿಧಾನ—ಸಾಬೂನಿನ ಜಡ್ಡು ಮೈಯಲ್ಲಿ ನಿಲ್ಲುವುದಿಲ್ಲ. ಬೆಲೆ ೧ಕ್ಕೆ ೦—೨—೬ ಪೈ. ಡಜನಿಗೆ ೧—೮—೦.

# "ವಿಷು ಸಂಕ್ರಮಣ"

ಲೇಖಕರು:—"ಎಮ್ಮಣ್ಣ", ಸುಳ್ಯ.

ಸೌರಮಾನದ ವರ್ಷಾಂತ್ಯವೆ ವಿಷುಸಂಕ್ರಮಣ! 'ವಿಷು' ಎಂದರೆ ಹಿಂದೂಗಳಿಗೆಲ್ಲ ಒಂದು ದೊಡ್ಡ ಹಬ್ಬ. ಈ ಹಬ್ಬವನ್ನು ಧನಿಕರಿಂದ ಮೊದಲ್ಗೊಂಡು ಬಡವರ ವರೆಗಿನವರು ಆಚರಿಸದೇ ಇಲ್ಲ. ಹಿಂದೂಗಳಿಗೆ ಹಬ್ಬವೆಂದರೆ ಕೋಲಾಹಲದ ದಿನ–ಅಂದಿನ ಒಳ್ಳೊಳ್ಳೆ ತಿಂಡಿತಿನಸುಗಳೇನು? ಆಪ್ತೇಷ್ಟರನ್ನು ಉಪಚರಿಸುವುದೇನು? ವೆಚ್ಚವನ್ನು ಆದಷ್ಟು ಹೆಚ್ಚಿಸುವ ಸೌಖ್ಯವೇನು? ಉಡಿಗೆ ತೊಡಿಗೆಯ ಬೆಡಗೇನು? ಗಲಾಟೆಯೇನು? ಗೌಜಿಯೇನು?

ನಮ್ಮ ದಾಸಯ್ಯನವರ ಮಗಳೊಬ್ಬಳಿಗೆ ಕಳೆದ ವರ್ಷ ಮದುವೆಯಾಗಿದ್ದಿತು. ಅಂದ ಮೇಲೆ ಕೇಳಬೇಕೆ?–ಈ ವರ್ಷ ಅವರಲ್ಲಿ ಭಾರೀ ಅತಿಥಿಗಳು. ಹಬ್ಬದ ಮೊದಲಿನ ದಿನವೇ ಅಳಿಯನೂ ಬೀಗರೂ ದಾಸಯ್ಯನವರ ಮನೆಯಲ್ಲಿಳಿದಿದ್ದರು.

ದಾಸಯ್ಯನವರು ಬಹು ಬಡವ–ಮೇಲಾಗಿ ಕೂಲಿಯಾಳು. ದುಡಿದರೆ ಮಾತ್ರ ಉಂಟು—ಅರ್ಧಸೇರು ಗರ್ಜಿ! ತನ್ನದೆಂದು ಕರೆಯಲು ಅವರ ಕೈಯಲ್ಲಿ ಚಿಕ್ಕಾಸೂ ಇಲ್ಲ. ಮನೆಯಲ್ಲೊಬ್ಬಳು ಹೆಂಡತಿ,–ಆರು ಮಕ್ಕಳು. ಎಲ್ಲರೂ ಹೊಟ್ಟೆಯ ಸಲುಗಾಗಿ ದಾಸಯ್ಯನವರ ಕೊರಳನ್ನೇ ಹಿಚುಕುತ್ತಿದ್ದರು.

"ವಿಷು"ವಿನ ದಿನ ಬೆಳಿಗ್ಯೆ ದಾಸಯ್ಯನವರು ತನ್ನ ಹೆಂಡತಿಯನ್ನು ಕೂಡಿಕೊಂಡು ಧನಿಯ ಮನೆಗೆ ಹೋದರು. ಇಂದು ಏನಾದರೂ ಸಿಕ್ಕೀತು; ಮನೆಗೆ ಬಂದವರನ್ನು ಸಂತೃಪ್ತಿಗೊಳಿಸಿ ಮರ್ಯಾದೆಯನ್ನುಳಿಸಿಕೊಳ್ಳಬಹುದು ಎಂದು ಯೋಚಿಸಿಕೊಂಡರು.

ಶ್ರೀಪತಿರಾಯರಿಗೆ ದಾಸಯ್ಯನವರು ವಂದಿಸಿ, ಕೈಜೋಡಿಸಿ ದೂರ ನಿಂತುಕೊಂಡರು.—ಅವರ ಹೃದಯವು ಬಡಬಡವೆನ್ನುತ್ತಿತ್ತು.

ಶ್ರೀಪತಿರಾಯರಾದರೋ ಮುಖ ಗಂಟಿಕ್ಕಿಕ್ಕೊಂಡು, ಮದಾಂಧತೆಯಿಂದ ಕಳೆಯೇರಿದ ಗಂಭೀರಭಾವವನ್ನು ಹೊರಸೂಸುತ್ತ ಮಂಚದ ಮೇಲೆ ಕೂತಿದ್ದರು.

ದಾಸಯ್ಯ—"ಸ್ವಾಮಿ, ಇಂದು 'ವಿಷು'.... . ಏನನ್ನಾದರೂ... ...ಕೊಡುತ್ತೀ . . . ಹೊರಗಿನವರು ಬಂದಿದ್ದಾರೆ.

ಶ್ರೀಪತಿ (ಗದರಿಸುತ್ತಾ):—"ನಿಮಗೆಲ್ಲಾ ಏತರ 'ವಿಷು'ವೋ? ನಿಮ್ಮಂತಹರೆಲ್ಲ ಅಳಿಯಂದಿರನ್ನು ಕರೆಯಿಸಿ 'ಸಮ್ಮಾನ' ಮಾಡುವುದಾದರೆ ಮತ್ತೇನುಳಿಯಿತೋ?? ಹಾಗಾದರೆ ನಾವೇನು ಮಾಡಬೇಕು? ಹೋಗು, ಈ ಹೊತ್ತು ಗದ್ದೆಯಲ್ಲಿ ಕೆಲಸ ಮಾಡು–ಎಲ್ಲಾ ನಾಳೆ!

ದಾಸಯ್ಯ–"ಮರ್ಯಾದೆ. . ಹೋ . . . ಗುತ್ತದೆ. ಜೀಯಾ'

ಶ್ರೀಪತಿ–(ಕೋಪದಿಂದ) "ನಿನ್ನ ಹೆಂಡತಿಯಿದ್ದಾಳಲ್ಲ ?"

ದಾಸಯ್ಯನ ತಲೆಯು ಬಿಸಿಯೇರಿತು. ಮತ್ತೂ ಸಮಾಧಾನದಿಂದ, "ನಿನ್ನೆ ಸಹ ನಮಗೆ ಊಟವಾಗಲಿಲ್ಲ ಬುದ್ಧೀ–ಮೂರು ದಿನಗಳ ತನಕ ಕೆಲಸಮಾಡಿದ ಪಡಿಯನ್ನಾದರೂ ಕೊ––ಡಿ.

ಶ್ರೀಪತಿ–"ಹೊಳೆಗೆ ಹಾರಿ ಸಾಯಿರಿ! ಕೊಟ್ಟಷ್ಟಿಲ್ಲ! ಬೆಳಗ್ಗಿನ ಜಾವದಲ್ಲೇ ಈ ಮಾರಿ! ನಡೆಯಿರಿ—ನಿಮ್ಮ ಹರಟೆಯೊಡನೆ!!!

ದಾಸಯ್ಯನವರು ಕಂಗಾಲಾದರು. ಬೇರೇನು ಮಾಡಲಿ–ಎಲ್ಲಿಗೆ ಹೋಗಲಿ ಎಂದು ಅವರ ಯೋಚನೆಗೆ ನಿಲುಕದೆ ಹೋಯಿತು. ಆದರೂ ಕಿಂಚಿತ್ ಆಶೆಯಿಂದ ಪತ್ನಿಯೊಡನೆ ಧನಿಯ ಅಂಗಳದಲ್ಲೇ ಕುಳಿತರು. ರಾಯರು ಸಮಾಧಾನರಾದ ಮೇಲೆ ಪಡಿಯನ್ನು ಕೊಡಲು ಮನಸ್ಸುಮಾಡದಿರರೆಂದು ಬಗೆದರು.

ರಾಯರ ಮನೆಯೊಳಗೆ ಕಾಫಿಯಾಯಿತು; ತಿಂಡಿಯಾಯಿತು. ಬಗೆಬಗೆಯ ಭಕ್ಷ್ಯಗಳ ಏರ್ಪಾಡಾಯಿತು–ಕೊನೆಗೆ ಮಧ್ಯಾಹ್ನವೂ ಆಯಿತು! ಅಂತೆಯೇ ಗದ್ದಲವೂ ಊಟವೂ ಆಯಿತು. ಅದರೂ ದಾಸಯ್ಯನವರು ಸತ್ಯಾಗ್ರಹಿಯಂತೆ ಅಂಗಳದಿಂದ ಕದಲಲಿಲ್ಲ. ಧನಿಯನ್ನು ನಂಬಿ ಮಾನಕ್ಕೆ, ಮರ್ಯಾದೆಗೆ ಕುಂದುಂಟಾಯಿತಲ್ಲಾ ಎಂದು ಅವರು ಕೊರಗಿದರು–ಮರುಗಿದರು.

ಹಸಿವೆಯಿಂದ ಬೆಂಡಾದ ದಾಸಯ್ಯನವರ ಮಕ್ಕಳು ತಂದೆತಾಯಿಗಳನ್ನು ಮನೆಯಲ್ಲಿ ಕಾದರು. ಆದರೆ, ಅವರಿಬ್ಬರೂ ಹಿಂತಿರುಗದಿದ್ದುದರಿಂದ ಧನಿಯ ಮನೆಗೆ ಹೋದರು. ದಾಸಯ್ಯನವರೂ ಅವರ ಪತ್ನಿಯೂ ಕಣ್ಣೀರು ಸುರಿಸುತ್ತಿರುವುದನ್ನು ಕಂಡು ಮಕ್ಕಳು ಅತ್ತುಬಿಟ್ಟುವು. ಶ್ರೀಪತಿರಾಯರು ಇದನ್ನು ಕಂಡೂ ಕಾಣದವರಂತೆ ಒಳಗೆ ಕುಳಿತಿದ್ದರು.

ಹಸಿವೆಯಿಂದ ಬಳಲುತ್ತಿರುವ ಒಂದು ಬಡ ಕುಟುಂಬವು ಹೊಟ್ಟೆಗಿಲ್ಲದೆ ಅಂಗಳದಲ್ಲ ಯಾತನೆಪಡುತ್ತಿದೆ!–ಸತ್ಯಾಗ್ರಹವನ್ನಾರಂಭಿಸಿದೆ. ಅದೇ ಕಾಲದಲ್ಲಿ ಮನೆಯ ಒಳಗೆ ನಗುತ್ತಾ, ಬಾಯಾಡಿಸುತ್ತಾ, ತಿಂಡಿತಿನಿಸುಗಳ ಮೇಲೆ ನಲಿದಾಡುತ್ತಾ, ಮತ್ತೊಂದು ಐಶ್ವರ್ಯವಂತ ಕುಟುಂಬವು ಆನಂದಮಯಸಾಗರದಲ್ಲಿ ತೇಲಾಡುತ್ತಿದೆ! ಹಾ! ದೇವ ಪ್ರಪಂಚದಲ್ಲಿನ ವ್ಯತ್ಯಾಸವೇ!

ಇಳಿಹೊತ್ತಿನ ತನಕವೂ ಕ್ಷುಧಾಬಾಧೆಯಿಂದ ನರಳುತ್ತಾ ಇದ್ದ ಸಂಸಾರವು ಕುಳಿತಿದ್ದ ಆ ಒಂದು ಹಾಸುಗಲ್ಲು ಅಷ್ಟರಲ್ಲೇ ಕರಗಿ, ನೀರಾಗಿ, ಚಿಂತಾಗ್ನಿಯ ಜ್ವಾಲೆಗೆ ಆವಿಯಾಗಿ, ಮೋಡವಾಗಿ ಮಾರ್ಪಟ್ಟಿತು. ಬಡಕುಟುಂಬವು ಕಣ್ಣುಗಳಲ್ಲಿ ನೀರನ್ನು ಸುರಿಸಿತು. ಆದರೆ ಧನಿಕ ಶ್ರೀಪತಿಯ ಮನಸ್ಸು, ಗಾಳಿಗೆ ಮರದೆಲೆಯು ಅಲುಗಾಡುವಷ್ಟೂ ಅಲುಗಾಡಲಿಲ್ಲ. ಕಾರಣ, ಅದು ಅಪಾರವಾದ ಸಿರಿಸಂಪತ್ತಿನೊಂದಿಗೆ ಉಕ್ಕಿನ ತ್ರಿಜೋರಿಯಲ್ಲಡಗಿಕೊಂಡಿದ್ದಿತು.

ಅಂದಿನ ದಿನ ದಾಸಯ್ಯನವರ ಇಡೀ ಸಂಸಾರವು ಗೆಣಸುಗಳನ್ನು ತಿಂದು ದಿನಹರಣೆಮಾಡಿತು! ಅತಿಥಿಗಳಿಗೆ ಹೇಗೊ ಅಲ್ಪಸ್ವಲ್ಪ ಸತ್ಕಾರವಾಗದಿಲ್ಲ. ಹಬ್ಬದ ದಿನದಲ್ಲಾದರೂ ಗಂಜಿಯ ಮುಖವನ್ನು ಕಾಣುವ ಪುಣ್ಯವು ಅವರಿಗಿದ್ದಿಲ್ಲ. ಬಡವರನ್ನು ದಣಿಸುವ ಸಿರಿಸಂಪತ್ತು ನಾಶವಾಗಲಿ! ಬಡಕುಟುಂಬಗಳ ಆರ್ತನಾದವನ್ನು ಕೇಳಕೇಳುತ್ತಾ ಹೊಟ್ಟೆಯ ಉರಿಯನ್ನು ನೋಡ ನೋಡುತ್ತಾ ದ್ರವ್ಯರಾಶಿಯಲ್ಲೊರಗಿ ನಿದ್ರಿಸುತ್ತಿರುವ ಧನಿಕ ಶ್ರೀಮಂತರಿದ್ದರೆ ಅವರಿಂದ ಇಹಕ್ಕೇನು ಫಲ?

ಪ್ರಿಯವಾದ ಸುಳ್ಳನ್ನು ತ್ಯಜಿಸಬೇಕು.



# ನಾರದರ ತಂಬೂರಿ.



"ನಾರದರ ತಂಬೂರಿ"ಯು ಅಖಿಳ ಕರ್ನಾಟಕದಲ್ಲಿ ಪ್ರಖ್ಯಾತವಾದುದು. ಕಂಡದ್ದನ್ನು ಕಂಡಂತೆಯೇ ವ್ಯಂಗವಾಗಿ ಖಂಡಿಸಿ ಮುಂಡಿಸಿ, ಅನೇಕರ ಪ್ರಶಂಸೆಗೆ ಪಾತ್ರವಾದುದು. ಮಾನ್ಯ ಲೇಖಕರು ಒಂದು ಸುಪ್ರಸಿದ್ಧ ಪತ್ರಿಕೆಯ ಸಂಪಾದಕ ವರ್ಗದವರು. ಇಂತಹ ಉದ್ಬೋಧಕ ಲೇಖಗಳನ್ನು 'ಬಡವರ ಬಂಧು'ವಿಗೆ ತಾನು ಪದೇ ಪದೇ ಬರೆವೆನೆಂದಾಶ್ವಾಸನೆಯನ್ನಿತ್ತ ಅವರಿಗೆ ನಮ್ಮ ವಾಚಕರ ಕಡೆಯಿಂದ ಹೃತ್ಪೂರ್ವಕ ವಂದನೆಗಳು. ಸಂ. ಬ. ಬ.

ಗುಡುಗುಡಿಯನು ಸೇದಿ ನೋಡು । ನಿನ್ನ ।
ಒಡಲೊಳಗಿದ್ದ ರೋಗವ ನೀಡಾಡು ॥

ಬಿಳಿ ರಾಯರೇ! ಇದೊಂದು ಪೂರ್ವಕಾಲದ ದಾಸರ ಪದ. ಇದು ನವನಾಗರಿಕರ ಕಿವಿಗೆ ಸುಶ್ರಾವ್ಯವೆನಿಸಲಿಕ್ಕಿಲ್ಲ. ಆದ್ದರಿಂದ ಇದೊಂದು "ಒಗಟಿನ ಲಾವಣಿ"ಯನ್ನೂ ಹಾಡಿ ನೋಡೋಣ.

ನಿಮ್ಮ ದೇಶ ಪಶ್ಚಿಮಕ್ಕೆ । ನಮ್ಮ ನಾಡು ಪೂರ್ವಕ್ಕೆ ॥
ನಿಮ್ಮ ದೇಶದಲ್ಲಿ ಕ್ಷೇಮ । ನಮ್ಮ ನಾಡಿನಲ್ಲಿ ಕ್ಷಾಮ ।
ನಿಮಗೆ ಸಂಬಳವು ಹೆಚ್ಚು । ನಮಗೆ ಕಲಿತು ಕಲಿವ ಹುಚ್ಚು ।
ನಿಮಗೆ ಗೊತ್ತು ಎಲ್ಲ ತಂತ್ರ । ನಮಗೆ ಗೊತ್ತು ತಿರುಪೆಮಂತ್ರ ।
ನೀವು ಸರ್ವದಾ ಉದ್ಯೋಗಿ । ನಾವು ಸದಾ ನಿರುದ್ಯೋಗಿ ॥
ನೀವು ಸದಾ ಸುಖದ ಭೋಗಿ । ನಾವು ನಿರಂತರವೂ ಜೋಗಿ ॥
ನೂರು ವರ್ಷ ನಿಮ್ಮ ಬಾಳು । ಐವತ್ತಕ್ಕೆ ನಮ್ಮ ಗೋಳು ॥
ನಿಮ್ಮ ತಲೆ ಪೂರ ಬೋಳು । ನಮ್ಮ ತಲೆ ಹೋಳು ಹೋಳು ॥
ನಿಮ್ಮ ಊಟ ಮೂರು ಬಾರಿ । ನಮ್ಮ ಊಟ ಎರಡು ಸಾರಿ ॥
ನೀವು ನಿಮಗೆ ಉಪಕಾರಿ । ನಾವು ನಮಗೆ ದೊಡ್ಡ ಮಾರಿ ॥
ನಿಮ್ಮಲ್ಲಿ ಬೇಗ ಲಗ್ನ । ನಿಮ್ಮಲ್ಲಿ ಅದಕ್ಕೆ ಭಗ್ನ ॥
ನಿಮ್ಮಲ್ಲಿ ಸತಿಯೆ ದೈವ । ನಮ್ಮಲ್ಲಿ ಪತಿಯೇ ದೈವ ॥
ನೀವು ಬಯಸುವುದು ಹಣ । ನಾವು ಬಯಸುವುದು ಗುಣ ॥
ನಿಮಗೆ ಬಂಗಾರದ ಮಣ । ನಮಗೆ ನಮ್ಮ ಋಣ ॥

ಸಾಕು ಮಾಡೋಣ ಹಾಡು! ವಾರ್ತಾವಿನೋದಗಳನ್ನಿಷ್ಟು ಹೇಳಿ ಬಿಡೋಣ—

## ಡಿಕ್ಸನರಿಯಲ್ಲಿ ಮಾರ್ಪಾಟು.

"ಜಪಾನಿ ಭಾಷೆಯಲ್ಲಿ ಚುಂಬನಾರ್ಥವಾದ ಶಬ್ದವೇ ಇಲ್ಲ." ಹಾಗಾದರೆ ಮುಠ್ಠಾಳ! ಆ ಡಿಕ್ಸನೆರಿ ಬರೆದವ. ಇಂಗ್ಲೀಸು ನಿಘಂಟುವನ್ನು ನೋಡಿಯಾದರೂ ತಿದ್ದಿಕೊಳ್ಳಬಾರದೇ?

## ಸಾಯುವ ಸುಖ.

'ಸ್ವಿಜರ್‌ಲ್ಯಾಂಡಿನ ಕೆಲವು ಭಾಗಗಳಲ್ಲಿ ಮೃತಪಟ್ಟವರನ್ನು ಸಾರ್ವಜನಿಕ ಖರ್ಚಿನಿಂದಲೇ ಹುಗಿಯುವರು. ಮೃತನ ಮನೆಯವರು ಶ್ರೀಮಂತರಿರಲಿ; ಬಡವರೇ ಇರಲಿ_ ಅವರಿಗೆ ಹುಗಿಸುವ ಖರ್ಚು ಬೀಳುವುದಿಲ್ಲ._ಜಂಬೂ ದ್ವೀಪದಲ್ಲಿಯೂ ಹೀಗೆ ಇದ್ದರೆ, ಎಷ್ಟೋ ಮಂದಿ ಲುಬ್ಧ ಶ್ರೀಮಂತರು ನಿಶ್ಚಿಂತೆಯಿಂದ ಪ್ರಾಣಬಿಡುತ್ತಿದ್ದರಲ್ಲವೇ?

## ಎರಡು ಕೈಯಲ್ಲಿ ಊಟ.

"ಜಪಾನು ದೇಶದಲ್ಲಿ ಎರಡು ಕೈಗಳಿಂದಲೂ ಬರೆಯಲಿಕ್ಕೆ ಕಲಿಸುತ್ತಾರೆ." ಆದ್ದರಿಂದ ಉಣ್ಣಲಿಕ್ಕೆ ಒಂದೇ ಕೈ ಸಾಕು! ಜಂಬೂ ದ್ವೀಪದಲ್ಲಿ ಒಂದೇ ಕೈಯಿಂದ ಬರೆಯಲಿಕ್ಕೆ ಕಲಿಸುವ ಕಾರಣ, ಅಲ್ಲಿ ಉಣ್ಣಲಿಕ್ಕೆ ಎರಡು ಕೈಗಳೂ ಬೇಕು.

## ಸ್ವರೂಪ ಪರೀಕ್ಷೆ.

ಒಂದು ಪಟ್ಟಣದಲ್ಲಿ ಒಬ್ಬನ ಹತ್ತಿರ ಒಂದು ಒಳ್ಳೇ ನಾಯಿ ಇತ್ತು, ಅದಕ್ಕೆ ಸುಭಗ ಯಾರು, ತಿರುಕುಳಿ ಯಾರು ಎಂದು ತಿಳಿಯುವ ಶಕ್ತಿ ಇತ್ತೆಂದು ಅದರ ಯಜಮಾನನ ಹೊಗಳಿಕೆ. ಒಂದು ದಿನ "ನಿನ್ನ ನಾಯಿ ಎಲ್ಲಿಯಪ್ಪಾ!" ಎಂದು ಅವನ ಸ್ನೇಹಿತ ಕೇಳಿದಾಗ, "ಅದು ನನ್ನನ್ನು ಕಚ್ಚಿತು. ಯಾರಿಗೋ ಕೊಟ್ಟು ಬಿಟ್ಟೆ" ಎಂದು ಅವನು ಹೇಳಿದ. (ಎಂಥ ಸುಭಗ!)

## ನೋಟೀಸಿನ ಒಕ್ಕಣೆ.

ಸುಡುಗಾಡು ಪಟ್ಟಣದಲ್ಲಿ ಒಂದು ವಿದ್ಯುಚ್ಛಕ್ತಿಯ ಕಾರ್ಯಾಲಯ. ಅಲ್ಲಿ ಒಂದು ನೋಟೀಸು:—"ಜೋಕೆ! ಈ ತಂತಿಗಳನ್ನು ಮುಟ್ಟಿರಿ. ಕೂಡಲೇ ಮರಣ! ಆದ್ದರಿಂದ ಯಾರಾದರೂ ತಂತಿಗಳನ್ನು ಮುಟ್ಟಿದರೆ ಕೂಡಲೇ 'ಪ್ರಾಸಿಕ್ಯೂಶನ್'" (ಯಮಪಟ್ಟಣದಲ್ಲಿಯೇ?)

## ಕೋಮಟಿ ವಿದ್ಯೆ.

ಹರಕೂರಿನ ಒಂದು ಮುರುಕು ಬೀದಿ. ಕತ್ತಲೇ ಹೊತ್ತು. ಒಬ್ಬ ಕೋಮಟಿ, ದುಡ್ಡು ಕಟ್ಟಿಕೊಂಡು ಹೋಗುತ್ತಾ ಇದ್ದಾನೆ! ಅಷ್ಟರಲ್ಲಿ ಒಬ್ಬ ಕಳ್ಳ ಗಂಟು ಬಿದ್ದು—

ಕಳ್ಳ:—"ಆ ದುಡ್ಡಿಲ್ಲಿ ಕೊಡೋ ಒಳ್ಳೆ ಮಾತಿನಲ್ಲಿ. ಇಲ್ಲದಿದ್ದರೆ, ನಿನ್ನ ಮೆದುಳು ಪುಡಿಯಾದೀತು, ನೋಡಿಕೋ!"

ಕೋಮಟಿ:—"ಆಗಲಿ ಮಹಾರಾಯಾ! ಹಾಗೇ ಮಾಡು. ಪ್ರಪಂಚದಲ್ಲಿ ಮೆದುಳು ಇಲ್ಲದೆ ಬದುಕಬಹುದು. ದುಡ್ಡಿಲ್ಲದೆ ಬದುಕಲಾದೀತೇ? ನೀನೇ ಹೇಳು."

## ಶಕುನದ ಲಕ್ಷಣ.

ಸೀತಕ್ಕನ ಗಂಡ ರಾಮಣ್ಣ ಎಲ್ಲಿಗೆ ಹೊರಡಬೇಕಾದರೂ "ಶಕುನ" ನೋಡಬೇಕು. ಪುಸ್ತಕಕ್ಕೆ ಕಡ್ಡಿ ಹಾಕಿ ಏನು ಬರುತ್ತೆ ಅಂತ ಓದಬೇಕು. ಈ ಸಲ ಹೊರಟವನೂ ಕಡ್ಡಿ ಹಾಕಿದ್ದು "ರತ್ನಾವಳಿ" ನಾಟಕದ ಪುಸ್ತಕದಲ್ಲಿ. ಆ ದೃಶ್ಯ—

"ರತ್ನಾವಳಿ ಕೊರಳಿಗೆ ಬಳ್ಳೀ ನೇಣು" ಹಾಕಿಕೊಂಡದ್ದು.

ಚೆನ್ನಾಗಿಲ್ಲವೆಂದು ಎರಡನೇ ಪುಸ್ತಕಕ್ಕೆ, ಬೈಬಲೊಳಗೆ, ಕಡ್ಡಿ ಹಾಕಿದ.

"ನೀನೂ ಹೋಗು. ಹಾಗೇ ಮಾಡು" ಎಂದು ಇತ್ತು.

ಇದೇನು ಗ್ರಹಚಾರವೆಂದು ಆ ಮೇಲೆ ಮೂರನೆಯ ಪುಸ್ತಕ—ಹುಡುಗರ ಪಾಠದ್ದು. ಅದಕ್ಕೆ ಕಡ್ಡೀ ಹಾಕಿದಾಗ ದೊಡ್ಡ ಅಕ್ಷರದಲ್ಲಿ ಬರೆದಿತ್ತು—

"ಈಗಲೇ ಮಾಡಬೇಕಾದ್ದನ್ನು ನಾಳಿಗೆ ಬಾಕಿ ಇಡಬೇಡ."

## ಸೀತಕ್ಕನ ಔಷಧಿ.

ಅದೇ ರಾಮಣ್ಣನ ಹೆಂಡತಿ ಸೀತಕ್ಕ ಊರಿಗೆಲ್ಲ ಔಷಧಿ ಹೇಳುವವಳು. ಒಂದು ದಿನ ನೆರೆಮನೆ ಹುಡುಗ ಬಂದು—

ಹುಡುಗ:—"ಸೀತಕ್ಕಾ! ಹೊಟ್ಟೆನೋವು; ಏನು ಔಷಧ?"

ಸೀತಕ್ಕ:—"ಹೊಟ್ಟೆ ಖಾಲಿಯಾಗಿರಬೇಕು; ಅದೇ ನೋವು ಏನಾದರೂ ಹೊಟ್ಟೆಗೆ ತುಂಬಿಸಿಕೊ. ನೋವು ವಾಸಿಯಾಗುತ್ತದೆ."

ಇದಾದ ಒಂದು ಗಳಿಗೆಯಲ್ಲಿ ಹೊರಮನೆ ಪುರೋಹಿತರು ಬಂದು,—

ಪುರೋ:—'ಸೀತಕ್ಕಾ! ತಲೆನೋವು. ಏನು ಔಷಧ?"

ಸೀತಕ್ಕ:—"ತಲೆ ಖಾಲಿಯಾಗಿರಬೇಕು. ಅದೇ ನೋವು. ಏನಾದರೂ ತಲೆಗೆ ತುಂಬಿಕೊಳ್ಳಿ. ನೋವು ಹೋಗುತ್ತದೆ."

## ಯೋಗಕ್ಷೇಮ.

ಹಜಾಮ್ ಹನುಮಂತಾಚಾರ್:—"ಒಹೋ—ಹೊ! ತೊಗರಿಬೇಳೆ ತಿಮ್ಮಣಾಚಾರ್ರು! ಏನು ಸ್ವಾಮಿ? ಹ್ಯಾಗಿದ್ದೀರಿ? ನಿಮ್ಮ ಹೆಂಡತಿ—?

ತೊ। ತಿಮ್ಮಣ್ಣಾಚಾರ್:—"ಏನ್ರಿ ಇದು? ನನಗೆ ಮದುವೆ ಯಾಗಿಲ್ಲ ಎಂತ ಮೊನ್ನೆ ತಾನೇ ಹೇಳಲಿಲ್ಲವೇ?"

ಹ॥ ಹ॥ ಆಚಾರ್:—ಸರಿ; ಸರಿ; ನಿಮಗೇನೋ ಆಗಿಲ್ಲ ಗೊತ್ತು. ನಿಮ್ಮ ಹೆಂಡತಿಗೂ ಆಗಿಲ್ಲವೇನ್ರಿ? ಅದು ನೀವು ಮೊನ್ನೆ ಹೇಳಲಿಲ್ಲವಲ್ಲಾ?

## ಸಂಶಯಕ್ಕೆ ಸಿದ್ಧೌಷಧಿ.

ನಾಗಪಟ್ಟಣದ ನಾಗಮ್ಮನವರ ಗಂಡ ರಾತ್ರಿ ಮನೆಗೆ ಬರುವಾಗ ಯಾವಾಗಲೂ ತಡ. ಎಲ್ಲಿಗೆ ಹೋಗುತ್ತಾರೆ ಅನ್ನುವುದು ಗೊತ್ತಿಲ್ಲ. ಸಂದೇಹ ಹೆಂಡತಿಗೆ. ಅದಕ್ಕೊಂದು ಉಪಾಯ ಹೇಳಿಕೊಟ್ಟೆ ನಾನವರಿಗೆ. "ನಿಮ್ಮ ಗಂಡ ಬಂದ ಕೂಡಲೇ, ಮೆಲ್ಲಗೆ ಹಿತ್ತಿಲ ಬಾಗಿಲ ಮೂಲೆಗೆ ಸೇರಿ, ಆ ಬಾಗಿಲ ಸಂಧಿಯಲ್ಲಿ ಸುಮ್ಮ ಸುಮ್ಮನೆ "ಶ್ಯಾಮಣ್ಣಾ! ಹೋಗೋ," ಎಂದು ಪಿಸಗುಟ್ಟಿ, ನಿಮ್ಮಷ್ಟಕ್ಕೆ" ಅಂತ; ಅವರು ಹಾಗೇ ಮಾಡಿದರು. ಗಂಡನಿಗೂ ಸಂಶಯ ಬಂತಲ್ಲ ಹೆಂಡತಿ ಮೇಲೆ! ಅಂದಿನಿಂದ ರಾತ್ರಿ ಸಂಚಾರವಿಲ್ಲ. "ಫುಲ್‌ಸ್ಟಾಪ್!"

## ಹೊಸ ಆಯುಧ.

ಪತ್ರಿಕೆಗಳಲ್ಲೆಲ್ಲ "ಸಂಸಾರ ಸನ್ಯಾಸಿ"ಗಳ "ಸನ್ಯಾಸಿ ಸಂಸಾರ"ದ ಸುದ್ದಿ ಸಮಾಚಾರ; ಆಶ್ಚರ್ಯವಲ್ಲ. ಕಾಮನೀಗ ಹೂಬಾಣವನ್ನು ಕೈಬಿಟ್ಟಿದ್ದಾನೆ. ಫಿರಂಗಿ ಯಂತ್ರಕ್ಕೆ ಕೈಕೊಟ್ಟಿದ್ದಾನೆ.

ಸ್ವಾಮಿ! ಸಂಪಾದಕರೇ! ಹೋಗಿಬರಲೇ ಈಗ?



# ವಿವಿಧ  ಲೋಕ.



ಓ ಅನ್ಯ ಜನಾಂಗೀಯರೇ,

ನೈಸರ್ಗಿಕವಾದ ಗಿರಿತೊರೆಗಳಿಂದೊಪ್ಪುವ ಸೃಷ್ಟಿ ಸೌಂದರ್ಯದ ವೈಚಿತ್ರ್ಯವನ್ನೂ, ತಾಜಾಮಹಾಲು, ಗೋಲ್ಡನ್ ಟೆಂಪಲ್ಸ್; ಒಂದೇ ಕಲ್ಲಿನಿಂದ ಕೆತ್ತಿ ಎತ್ತರವಾಗಿ ನಿಲ್ಲಿಸಲ್ಪಟ್ಟಿರುವ ಗೋಮಟೇಶ್ವರನ ವಿಗ್ರಹ ಮೊದಲಾದುವುಗಳ ಸೊಬಗನ್ನು ನೋಡಬೇಕಾದರೆ ನಮ್ಮ ಭರತಭೂಮಿಗೆ ಬನ್ನಿರಿ.

ಪರಿಮಳಯುಕ್ತವಾದ ಚಂದನ, ಗಂಧ ಮತ್ತು ತೇಗು, ಬೀಟೆ, ಸಾಗುವಾನಿ ಮೊದಲಾದ ಮರಗಳನ್ನೂ, ಮಲ್ಲಿಗೆ, ಗುಲಾಬಿ, ಸೇವಂತಿಗೆ, ಕಮಲ ಮೊದಲಾದ ಹೂಗಳನ್ನೂ, ಗೋಧಿ, ಅಕ್ಕಿ, ಉದ್ದು, ಕಡಲೆ ಮೊದಲಾದ ಧಾನ್ಯಗಳನ್ನೂ, ತೆಂಗು, ಕಂಗು, ತಾಳೆ, ಬಾಳೆ ಮೊದಲಾದುವುಗಳನ್ನೂ ನೋಡಬೇಕಾದರೆ ನಮ್ಮ ಭರತ ಭೂಮಿಗೆ ಬನ್ನಿರಿ.

ಬಂಗಾರ, ಮುತ್ತು, ವಜ್ರ. ಕಬ್ಬಿಣ, ಕಲ್ಲಿದ್ದಲು ಮೊದಲಾದುವುಗಳ ಗಣಿಗಳನ್ನೂ, ಗಂಧ, ಬಂಗಾರ, ಕಬ್ಬಿಣಗಳ ಕೈಕೆಲಸಗಳನ್ನೂ, ಭಾವಪೂರಿತವಾಗಿ ಬರೆದಿರುವ ಮತ್ತು ಕೆತ್ತಿರುವ ಅಜಂತ, ಆಬು, ಬೇಲೂರು ಮೊದಲಾದ ಕಡೆಗಳ ಕೆತ್ತನೆಕೆಲಸಗಳನ್ನೂ, ರವಿವರ್ಮನೇ ಮೊದಲಾದವರು ಬರೆದಿರುವ ಚಿತ್ರಗಳನ್ನೂ ನೋಡಬೇಕಾದರೆ ನಮ್ಮ ಭರತಭೂಮಿಗೆ ಬನ್ನಿರಿ.

ಇಡೀ ಭೂಲೋಕದ ಮೇಲಿರುವ ಪರ್ವತರಾಜನೊ ಎಂಬಂತೆ ಅಹಂಕಾರದಿಂದ ತಲೆಯನ್ನು ಮೇಲಕ್ಕೆತ್ತಿಕೊಂಡಿರುವ ಮೌಂಟ್ ಎವರೆಸ್ಟ್, ಕಿಂಚನಾಗಂಗಾ ಮೊದಲಾದ ಪರ್ವತಗಳನ್ನೂ, ಭೂಲೋಕದ ತೋಟವೆಂಬ ಹೆಸರನ್ನು ಪಡೆದಿರುವ ಕಾಶ್ಮೀರವನ್ನೂ, ಗಯಾ, ಕಾಶೀ, ರಾಮೇಶ್ವರ, ಉಡುಪಿ ಮೊದಲಾದ ಪಾಪಹರ ಪ್ರದೇಶಗಳನ್ನೂ, ಹಳೆಯ ವೈಭವವನ್ನೂ ಜನರಿಗೆ ತೋರಿಸುವುದಕ್ಕೋ ಎಂಬಂತೆ ಅಳಿದುಳಿದ ಹಂಪೆ, ಶ್ರೀರಂಗಪಟ್ಟಣ, ಬಾರಕೂರು ಮೊದಲಾದ ಪ್ರದೇಶಗಳನ್ನೂ, ಗಂಗಾಸಿಂಧೂ ಗೆರೆಸೊಪ್ಪೆ ಜೋಗ ಮೊದಲಾದ ಜಲಾಶಯಗಳನ್ನೂ ನೋಡಬೇಕಾದರೆ ನಮ್ಮ ಭರತಭೂಮಿಗೆ ಬನ್ನಿರಿ.

ಇಡೀ ಗೋಲದಲ್ಲಿ ಈ ವರೆಗೆ "ಮಹಾತ್ಮ"ನೆಂಬ ಬಿರುದನ್ನು ಯಾರೂ ಪಡೆಯದಿದ್ದರೂ ಕೂಡ, ಅಂತಹ ಬಿರುದನ್ನು ಪಡೆದಿರುವ "ಬಡವರ ಬಂಧು" ಗಾಂಧಿಜೀಯವರನ್ನೂ, ತನ್ನ ೧೨ನೇಯ ವಯಸ್ಸಿನಲ್ಲಿಯೇ ಹರಿಕಥೆಯನ್ನು ಹಾಡಿ "ಬಾಲಭಾರತಿ" "ಅಭಿನವಶಾರದೆ" "ಸರಸವಾಣಿ" ಮೊದಲಾದ ಬಿರುದುಗಳನ್ನೂ ಹೊಂದಿ, ಇಡೀ ಕರ್ನಾಟಕವನ್ನೇ ಬೆರಗುಗೊಳಿಸಿದ ಶ್ರೀ। ಯದುಗಿರಿಯಮ್ಮನವರಂತಹರನ್ನೂ, "ವಿಶ್ವಕವಿ"ಗಳೆಂಬ ಬಿರುದನ್ನು ಹೊಂದಿದ ರವೀಂದ್ರನಾಥ ಠಾಕೂರರವರನ್ನೂ ನೋಡಬೇಕಾದರೆ ನಮ್ಮ ಭರತಭೂಮಿಗೆ ಬನ್ನಿರಿ.

ಇಡೀ ಹಿಂದೂಸ್ಥಾನವನ್ನೇ ತಮ್ಮ ಚಾತುರ್ಯದಿಂದಲೂ, ಭಕ್ತಿಯಿಂದಲೂ ಮುಗ್ಧವನ್ನಾಗಿ ಮಾಡಿದ ಶ್ರೀಕೃಷ್ಣ, ಮೀರಾಬಾಯಿ, ಚೈತನ್ಯ, ಗುರುನಾನಕ್, ಬುದ್ಧ, ಶಿವಾಜಿ, ಮೊದಲಾದವರ ಜೀವನ ಚರಿತ್ರೆಯನ್ನು ಕೇಳಬೇಕಾದರೂ, ತಾರಾ, ದಮಯಂತಿ, ದ್ರೌಪತಿ, ಸಾವಿತ್ರೀ, ಸೀತಾ ಮೊದಲಾದ ಪತಿವ್ರತಾ ಶಿರೋಮಣಿಗಳ ಚರಿತ್ರೆಯನ್ನು ಮನನಮಾಡಬೇಕಾದರೂ, ಪೌರಾಣಿಕ ವ್ಯಕ್ತಿಗಳಾದ ಕೃಷ್ಣ, ರಾಮ, ಅರ್ಜುನ, ವಿಶ್ವಾಮಿತ್ರ ಮೊದಲಾದವರ ಕಥೆಗಳನ್ನು ಕೇಳಬೇಕಾದರೂ ನಮ್ಮ ಭರತಭೂಮಿಗೆ ಬನ್ನಿರಿ.

ಶ್ರೀ. ಚಂದ್ರರಾಜ ಶೆಟ್ಟಿ.

## ಕಣ್ಣಿಲ್ಲ ನೋಡುತ್ತಾಳೆ! ಕಿವಿಯಿಲ್ಲ ಕೇಳುತ್ತಾಳೆ!

'ಅಮೇರಿಕದ ಅದ್ಭುತಕರ ಸ್ತ್ರೀ ಎಂದು ಪ್ರಖ್ಯಾತಳಾದ ಮಿಸ್ ಹೆಲೆನ್ ಕೆಲ್ಲರ್ ಎಂಬವಳಿಗೆ ಮೊನ್ನೆ ಗ್ಲಾಸ್ಗೋ ವಿಶ್ವವಿದ್ಯಾಲಯದ ಎಲ್. ಎಲ್. ಡಿ. ಪದವಿಯು ಕೊಡಲಾಯಿತು. ಹೆಲೆನಳು ತನ್ನ ಒಂಭತ್ತನೇ ತಿಂಗಳ ಪ್ರಾಯದಲ್ಲಿ ಕುರುಡಿಯೂ ಕಿವುಡಿಯೂ ಆದಳು. ಈಗ ಅವಳಿಗೆ ಐವತ್ತೆರಡು ವರ್ಷ ಪ್ರಾಯ ಮುಂಚಿನಂತೆ ಕಿವುಡಿ ಮತ್ತು ಕುರುಡಿ. ಆದರೆ, ಕಣ್ಣಿಲ್ಲದಿದ್ದರೂ ಲೋಕವ್ಯವಹಾರಗಳನ್ನು ನೋಡುತ್ತಾಳೆ. ಸೃಷ್ಟಿ ಸೌಂದರ್ಯವನ್ನು ಸೌಮ್ಯವಾಗಿ ಬಣ್ಣಿಸುತ್ತಾಳೆ. ಕಿವುಡಿಯಾದರೂ ಹಾರ್ಮೋನಿಯಮ್ ಬಾರಿಸುತ್ತಾಳೆ. ಪಯನೋರಾಗವು ಸುಮಧುರಮಧುರವೆನ್ನುತ್ತಾಳೆ. ಪುಷ್ಪಗಳನ್ನು ಕಂಡು ಸುಂದರವಾಗಿವೆಯೆನ್ನುವಳು. ಹೆಲೆನಳ ಮಿತ್ರಳಾಗಿ ಮಿಸ್ ಮೇರಿ ತೊಂಪ್ಸನ್ ಎಂಬವಳು ಬಾಲ್ಯದಿಂದಲೇ ಇರುವಳು. ಈ ತೊಂಪ್ಸನಳ ಮೂಲಕವೇ ಹೆಲೆನಳು ಎಲ್ಲವುಗಳನ್ನೂ ಅರಿತುಕೊಳ್ಳುವಳು. ಹೆಲೆನಳೊಡನೆ ಯಾರಾದರೂ ಮಾತನಾಡಲು ಬಂದರೆ, ತೊಂಪ್ಸನಳು ಆ ಸಂಗತಿಯನ್ನು ಅವಳಿಗೆ ತಿಳುಹಿಸುವಳು. ಬಂದವರ ಅಭಿಪ್ರಾಯಗಳನ್ನು ತೊಂಪ್ಸನಳು ಹೇಳುವಾಗ, ಹೆಲೆನಳು ತನ್ನ ಕೈಬೆರಳುಗಳನ್ನು ಅವಳ ತುಟಿಯ ಮೇಲಿಡುವಳು. ಹಾಗೆ ಅವಳ ತುಟಿಯ ಮೇಲಟ್ಟ ಬೆರಳುಗಳಿಂದಾಗಿ ಅವಳಿಗೆ ಸಕಲ ಮಾತುಗಳು ಮುಂದಟ್ಟಾಗುವುವು. ಹೆಲೆನಳು ವಸ್ತುಗಳ ಸೌಂದರ್ಯವನ್ನು ಬೆರಳಿನ ಸ್ಪರ್ಶದಿಂದಲೇ ಅಳೆಯುವಳು. ಕಣ್ಣಿದ್ದು ನೋಡುವವರಿಗಿಂತಲೂ ವಿವರ ಸಂಗತಿಗಳನ್ನು ಅವಳು ವಸ್ತು ಸ್ಪರ್ಶದಿಂದಾಗಿ ಹೇಳುವಳು. ಅವಳು ಅನೇಕ ಗ್ರಂಥಗಳನ್ನು ಬರೆದಿರುವಳು. ಎಲ್ಲವೂ ಎಲ್ಲರಿಂದಲೂ ಶ್ಲಾಘಿಸಲ್ಪಟ್ಟವೆ. ಅನವರತವೂ ಜ್ಞಾನಸಂಪಾದನೆಯ ಜಿಜ್ಞಾಸೆಯಲ್ಲಿರುವುದರಿಂದಾಗಿ ಅವಳು ಇಷ್ಟೊಂದು ತೀಕ್ಷ್ಣ ಬುದ್ಧಿಯುಳ್ಳವಳಾದಳೆಂದು ತಿಳಿದುಬರುತ್ತದೆ.

Sunday Times

## ಮೂರು ಹೋಗಿ ಮೂವತ್ತು ಭಾಷೆಗಳಾದವು.

ಶ್ರೀಮಾನ್ ಬೆನಗಲ್ ರಾಮರಾಯರು ಮೈಸೂರು ಕರ್ಣಾಟಕ ಸಂಘದ ವಾರ್ಷಿಕೋತ್ಸವ ಸಮಾರಂಭದಲ್ಲಿ ಅಧ್ಯಕ್ಷಸ್ಥಾನದಿಂದ ನುಡಿದ ಮಾನನೀಯ ನುಡಿಗಳಿವು—

ಈಚೆಗೆ ಕನ್ನಡದಲ್ಲಿ ಅನೇಕ ಗ್ರಂಥಗಳು ಹುಟ್ಟುತ್ತವೆ. ಅನೇಕರು ಸರಳವಾದ ಶೈಲಿಯಲ್ಲಿ ಬರೆಯಲು ಪ್ರಾರಂಭಿಸಿದ್ದಾರೆ. ಕನ್ನಡದಲ್ಲಿ ಈಚೆಗೆ ಒಂದು ಕ್ರಾಂತಿಯಾಗಿದೆ. ಇದು ಸಂತೋಷಕರವಾದ ವಿಷಯ. ಆದರೆ ಒಳ್ಳೆಯ ಗ್ರಂಥಗಳ ಜೊತೆಯಲ್ಲಿ ಕೆಟ್ಟ ಬರವಣಿಗೆಗಳೂ ತೋರಬೀಳುತ್ತವೆ. ಅನೇಕ ಗ್ರಂಥಕರ್ತರ ಅಭಿಪ್ರಾಯವೂ ತಿಳಿಯುವುದಿಲ್ಲ. ಅವರ ಬಾಷೆಯ ಅರ್ಥವೂ

ಹೋಳಿಯುವುದಿಲ್ಲ. "ಒಳ್ಳೆಯ ಗ್ರಂಥಗಳು ಉಳಿಯುತ್ತವೆ. ಕೆಟ್ಟವು ಹಾಳಾಗುತ್ತವೆ" ಎಂದು ಸಮ್ಮೇಳನದಲ್ಲಿ ಶ್ರೀ. ವಿ. ಸೀತಾರಾಮಯ್ಯನವರು ಹೇಳಿದರು. ಆದರೆ ಒಳ್ಳೆಯವು ಉಳಿದು ಕೆಟ್ಟದ್ದು ಹೋಗುವ ಕಾಲವು ಈಗ ಹೋಯಿತೆಂದು ನನ್ನ ಭಾವನೆ. ಏಕೆಂದರೆ, ದುಡ್ಡೊಂದಿದ್ದರೆ ಈಗ ಯಾವ ಗ್ರಂಥವನ್ನು ಬೇಕಾದರೂ ಅಚ್ಚು ಹಾಕಿಸಬಹುದು. ಸ್ವಲ್ಪ ಕಷ್ಟಪಟ್ಟರೆ ಪಠ್ಯಪುಸ್ತಕವಾಗಿ ಇಡುವಂತೆಯೂ ಮಾಡಬಹುದು!

ನಾನು ಹೇಳುವುದಿಷ್ಟೆ—ನೀವು ಯಾವ ಸರಣಿಯಲ್ಲಿ ಬೇಕಾದರೂ ಬರೆಯಿರಿ—ಮೂರು ಭಾಷೆಗಳು ಹೋಗಿ ಮೂವತ್ತು ಭಾಷೆಗಳಾಗದೆ ಕನ್ನಡವು ಎಲ್ಲರಿಗೂ ತಿಳಿಯುವಂತಹ ಒಂದೇ ಭಾಷೆಯಾದರೆ ಸಾಕು! ಈಗಿನ ಕಾಲದ ಅಭಿಪ್ರಾಯಗಳಿಗೆ ತಕ್ಕಂತೆ ಭಾಷೆಯನ್ನು ಪಂಡಿತರ ಸಹಾಯವಿಲ್ಲದೆ ಎಲ್ಲರೂ ತಿಳಿದುಕೊಳ್ಳುವ ಹಾಗೆ ಬರೆದರೆ ಸರ್ವರಿಗೂ ಕ್ಷೇಮವೆಂದು ನನಗೆ ತೋರುತ್ತದೆ. (ವಿಶ್ವಕರ್ನಾಟಕ)

### ಆಶ್ಚರ್ಯಜನಕ ಪ್ರಯೋಗ.

ರಾಮಾಯಣದಲ್ಲಿ ಖರನಂತಹ ರಾಕ್ಷಸನ ವರ್ಣನೆಯನ್ನು ನಾವು ಓದಿರುವೆವು. ಕತ್ತೆಯ ತಲೆ ಮತ್ತು ಮನುಷ್ಯನ ದೇಹವುಳ್ಳ ಗೊಂಬೆಯನ್ನು ನೋಡಿದರೆ ನಮಗೆ ನಗೆ ಬರುವುದು. ಆದರೆ ಇಂದು ಕೆಲವು ಜನ ಶಾಸ್ತ್ರಜ್ಞರು ಎರಡು ಪ್ರಾಣಿಗಳ ಈ ಬಗೆಯ ಮಿಶ್ರಣವನ್ನು ಮಾಡಿ ನೋಡುತ್ತಿರುವರು. ಎರಡು ಜಾತಿಯ ಕೀಟಗಳನ್ನು ತೆಗೆದುಕೊಂಡು ಅವುಗಳ ತಲೆಯನ್ನು ಕತ್ತರಿಸಿ ಬೇರೆ ಬೇರೆ ಮುಂಡಗಳ ಮೇಲೆ ಇಡುವುದು. ಹೀಗೆ ಮಾಡುವುದರಿಂದ ಎರಡೂ ಕೀಟಗಳು ತಂತಮ್ಮ ಮೂಲಜಾತಿಯ ಗುಣಧರ್ಮವನ್ನು ಬಿಟ್ಟು ನವೀನವಾಗಿ ದೊರೆತ ಜಾತಿಯ ಗುಣಧರ್ಮವನ್ನವಲಂಬಿಸುವುವು. ತಲೆಯನ್ನು ಕತ್ತರಿಸುವುದರಿಂದ ಕೀಟವು ಕೂಡಲೇ ಸಾಯುವುದಿಲ್ಲ. ಏಕೆಂದರೆ ಅದರ ಶರೀರದಲ್ಲಿ ಶ್ವಸನಕ್ರಿಯೆಯು ನಡೆಯುತ್ತಲೇ ಇರುವುದು. ಈ ಪ್ರಯೋಗವನ್ನು ಸಗಣಿಯ ಹುಳು ಮತ್ತು ಗಿಡದ ಮೇಲೆ ಹೋಗಿ ಎಲೆಗಳನ್ನು ತಿನ್ನುವ ಹುಳು ಇವುಗಳ ಮೇಲೆ ಮಾಡಲಾಯಿತು. ಅಷ್ಟು ಮಾಡಿದ ಕೂಡಲೇ ಮರದ ಮೇಲಿರುತ್ತಿದ್ದ ಹುಳುವು ಸಗಣಿಯೊಳಗೆ ಹೊಕ್ಕಿಕೊಂಡಿತು. ಸಗಣಿಯ ಹುಳುವು ಮರದ ಮೇಲೆ ಹತ್ತಿ ಎಲೆಯನ್ನು ತಿನ್ನಲು ಪ್ರಾರಂಭಿಸಿತು. ಇದರಿಂದ ಪ್ರಾಣಿಗಳ ಗುಣಧರ್ಮವು ತಲೆಯನ್ನವಲಂಬಿಸಿರುವುದೆಂಬುದು ಸಿದ್ಧವಾಗುವುದು. (ಜಯಕರ್ನಾಟಕ)

### ಚೀನಾ ಹುಡುಗಿಯರ ಸ್ವದೇಶಾಭಿಮಾನ.

"ನನ್ನಲ್ಲಿರುವ ಧೈರ್ಯವನ್ನೆಲ್ಲಾ ಒಟ್ಟುಗೂಡಿಸಿಕೊಂಡು ರಣರಂಗಕ್ಕೆ ಹೋಗಲು ಸಿದ್ಧನಾಗು. ಪಿತೃಭೂಮಿ ಜನ್ಮಭೂಮಿಗಾಗಿ ಯುದ್ಧಮಾಡು. ಈ ಪವಿತ್ರ ದಂಡಯಾತ್ರೆಯಲ್ಲಿ ನಾನೂ ನಿನ್ನನ್ನು ಕೂಡಿಕೊಳ್ಳುವೆನು. ಒಂದು ವೇಳೆ ಸ್ವದೇಶಕ್ಕಾಗಿ ನೀನು ನಿನ್ನ ಪ್ರಾಣಾರ್ಪಣೆ ಮಾಡಿದ್ದಾದರೆ, ನಿನ್ನ ಆತ್ಮವನ್ನು ನನ್ನ ಹೃದಯ ಮಂದಿರದಲ್ಲೆ ತುಂಬಿಟ್ಟುಕೊಳ್ಳುವೆನು" ಎಂಬುದಾಗಿ ಒಬ್ಬ ಶಾಲಾ ವಿದ್ಯಾರ್ಥಿನಿಯು ತನ್ನ ಪ್ರೀತಿ ಪಾತ್ರನಿಗೆ, ಸೈನ್ಯಕ್ಕೆ ಸೇರುವಂತೆ ಉತ್ತೇಜನ ಕೊಡಲು ಬರೆದಿರುತ್ತಾಳೆ.

ಚೀನಾ ಸ್ತ್ರೀಯರು ದೇಶಕ್ಕಾಗಿ ಇಂತಹ ಉತ್ಸಾಹವನ್ನು ಹಿಂದೆಂದೂ ಪ್ರದರ್ಶಿಸಿರಲಿಲ್ಲ. ಚೀನಾ ದೇಶ ದೊಡ್ಡ ಧ್ವನಿಯ ವಿದ್ಯಾರ್ಥಿನಿಯರು, ರಕ್ತದೇಹದ ಕೂಗು ಕೂಗುತ್ತಾ ತಮ್ಮ ಗಂಡಸರನ್ನು ಯುದ್ಧಕ್ಕೆ ಶಸ್ತ್ರ ತೊಡುವಂತೆ ಒತ್ತಾಯ ಮಾಡುತ್ತಾ ಶತ್ರುವಾದ ಜಪಾನನ್ನು ಎದುರಿಸುತ್ತಿದ್ದಾರೆ. "ನಮ್ಮ ಮನೆಗಳೆಂದರೆ ನಮಗೆ ಪ್ರೀತಿಯಿದೆ; ಆದರೆ ನಮ್ಮ ಸ್ವದೇಶ ಪ್ರೀತಿಯು ನಮ್ಮ ಹೃದಯಗಳಲ್ಲಿ ಇನ್ನೂ ಪ್ರಬಲವಾಗಿದೆ" ಎಂಬುದಾಗಿ ಒಬ್ಬ ಉಪನ್ಯಾಸಕಳು ಭಾಷಣ ಮಾಡಲಾಗಿ, ಶ್ರೋತೃಗಳು "ಶತ್ರುನಾಶ!" ಎಂದು ಕೂಗಿದರು.

ಅವರಿಗೆ ಯುದ್ಧ—ಜ್ವರವು ಹಿಡಿದುಬಿಟ್ಟಿದೆ. ನೂರಾರು ಜನ ಹುಡುಗಿಯರು ಯುದ್ಧದಲ್ಲಿ ಚಿಕಿತ್ಸೆ ಮಾಡುವುದನ್ನು ಕಲಿಯುತ್ತಿದ್ದಾರೆ; ನೂರಾರು ಜನರು ಓದುವುದನ್ನು ಬಿಟ್ಟು ಉಪನ್ಯಾಸ ಮಾಡುತ್ತಲೂ, ಧನ ಶೇಖರಮಾಡುತ್ತಲೂ ಇದ್ದಾರೆ. ಸಾವಿರಾರು ಮಂದಿ ತಮ್ಮಲ್ಲಿ "ಧರ್ಮಯುತ ಧೀರಸೇನ" ರಕ್ಷಣಾ ದಳಗಳ ಪಟಲಾಮುಗಳನ್ನು ಮಾಡಿಕೊಂಡಿದ್ದಾರೆ.

ವಾಸ್ತವವಾಗಿ, ಹೊಲಿಗೆ ಬಟ್ಟೆ ಹೋಗಿ ಕತ್ತಿ ಬಂದಿದೆ ಕೈಗಳಿಗೆ. ಒಂದೂವರೆ ಸಾವಿರ ವರ್ಷಗಳ ಹಿಂದೆ, ಪುರುಷ ವೇಷಧಾರಿಯಾಗಿ ತನ್ನ ಸಾಹಸ ಕೃತ್ಯಗಳಿಂದ ಸೇನಾನಿಯಾಗಿ ತನ್ನ ದಿವ್ಯ ರಾಷ್ಟ್ರದ ಉತ್ತರ ದಿಕ್ಕಿನಲ್ಲಿ ಒಳಕ್ಕೆ ನುಗ್ಗುತ್ತಿದ್ದವರನ್ನು ಧ್ವಂಸಮಾಡಿದ ಹ್ವಾಮುಲಾನ್ ಎಂಬ ಕಟುಕ ಕನ್ಯೆಯನ್ನು ಮೀರಿಸಬೇಕೆಂಬ ಪೌರುಷ ಈ ಚೀನಾದೇಶದ ಪುತ್ರಿಯರಲ್ಲಿ ಹುಟ್ಟಿ ಬೆಳೆದಿದೆ. (ಪ್ರಜಾಮತ.)

### ವಿಚಿತ್ರ ಪ್ರೇತ ಪೀಡೆ.

ಕಲ್ಕತ್ತದ ನೋತಿಗಲ್ಲಿನ ಒಂದು ಮನೆಯಲ್ಲಿ ಪ್ರೇತ ಬಾಧೆಯಿದೆಯೆಂದು ಅದರಲ್ಲಾರೂ ವಾಸಿಸಲೊಪ್ಪುತ್ತಿದ್ದಿಲ್ಲ. ಇದನ್ನು ಲಕ್ಷಿಸದೆ ಒಂದು ಆಂಗ್ಲೊ ಇಂಡಿಯನ್ ಕುಟುಂಬದವರು ಆ ಮನೆಯನ್ನು ಬಾಡಿಗೆಗೆ ತೆಗೆದುಕೊಂಡು ವಾಸಿಸಿದರು. ಇದಾದ ಕೆಲವು ದಿನಗಳ ವರೆಗೆ ಮನೆಯ ನಾಯಿಯು ಮಧ್ಯರಾತ್ರಿ ಬಹಳವಾಗಿ ಬಗುಳಿ ಗಲಾಟೆ ಮಾಡುತ್ತಿತ್ತು. ಒಂದು ರಾತ್ರಿ ಸುಮಾರು ೧೬ ವರುಷದ ಹುಡುಗಿಯೊಬ್ಬಳು ಇದ್ದಕ್ಕಿದ್ದ ಹಾಗೆ ಹಾಸಿಗೆಯಿಂದ ಎತ್ತಿ ಎಸೆಯಲ್ಪಟ್ಟಳು. ಆವಳಿಗೆ ಬಹಳ ಪೆಟ್ಟಾಗಿ ಆಸ್ಪತ್ರೆಗೊಯ್ಯಲ್ಪಟ್ಟಳು. ಅವಳೀಗ ಬದುಕುವುದು ಕಷ್ಟವಂತೆ. ೧೦ ವರ್ಷದ ಹುಡುಗನೊಬ್ಬನು ರಾತ್ರೆ ಮಲಗಿದ್ದಾಗ, ಅವನ ವಸ್ತ್ರವನ್ನೆಲ್ಲಾ ಎಳೆದು ಎಲ್ಲೆಲ್ಲೂ ಬಿಸಾಡಲಾಯಿತು, ಹುಡುಗನು ಭಯಭರಿತನಾಗಿ ಕೂಗಿದನು. ಕಪ್ಪಗಿನ ಹೆಂಗಸಿನ ರೂಪವೊಂದು ಕೋಣೆಯಿಂದ ಹೋಗುವುದು ತೋರಿ ಬಂತು. ಕೂಡಲೇ ವಿದ್ಯುತ್ ದೀಪವನ್ನು ಬೆಳಗಿಸಲಾಯಿತು. ಎಲ್ಲಿ ಹುಡುಕಿದರೂ ಯಾರೂ ಸಿಗಲಿಲ್ಲ. ಏನು ಮಾಡಿದರೂ ಮನೆ ಪ್ರೇತ ಪೀಡೆಯು ತಪ್ಪುವುದಿಲ್ಲವಂತೆ. ಈಗ ಈ ಆಂಗ್ಲೊ ಇಂಡಿಯನ್ ಕುಟುಂಬದವರು ತಾವು ಮುಂಗಡವಾಗಿ ಕೊಟ್ಟ ಬಾಡಿಗೆಯನ್ನು ಹಾಗೆಯೇ ಬಿಟ್ಟು ಮನೆ ಬಿಟ್ಟು ಹೋಗಲಿರುವರಂತೆ. (ನವಯುಗ.)

### ಬರ್ಲಿನದಲ್ಲಿ ಪ್ರತಿ ದಿವಸ ೩೫ ಲಕ್ಷ ಪತ್ರಿಕೆಗಳ ಮಾರಾಟ.

ಪಾಶ್ಚಾತ್ಯ ರಾಷ್ಟ್ರಗಳಲ್ಲಿ ವೃತ್ತ ಪತ್ರಿಕೆಗಳಿಗೆ ಬಹಳ ಮರ್ಯಾದೆಯುಂಟು. ವೃತ್ತಪತ್ರವು ರಾಷ್ಟ್ರದ ಆನೆಯ ಆಧಾರಸ್ತಂಭವೆಂದು ಅವರು ತಿಳಿಯುತ್ತಾರೆ. ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಪತ್ರಿಕೆಗಳಿಗೆ ಇಷ್ಟೊಂದು ಮಾನ್ಯ! ಪಾಶ್ಚಾತ್ಯ ರಾಷ್ಟ್ರಗಳ ಪ್ರತಿಯೊಂದು ಪಟ್ಟಣದಲ್ಲಿ ಪ್ರತಿ ದಿವಸ ಲೆಕ್ಕವಿಲ್ಲದಷ್ಟು ಪತ್ರಗಳು ಹೊರಡುತ್ತಿವೆ! ಲೋಕಪ್ರಿಯ ಪತ್ರಗಳು ದಿನಕ್ಕೆ ನಾಲ್ಕೈದಾವರ್ತಿ ಪ್ರಕಟವಾಗುವುವು ಅಲ್ಲಿ ಬಡವರು, ಬಲ್ಲಿದವರು, ಸಣ್ಣವರು, ದೊಡ್ಡವರು, ಹೆಂಗಸರು, ಗಂಡಸರು ಪ್ರತಿನಿತ್ಯ ತಪ್ಪದೆ ವೃತ್ತಪತ್ರಗಳನ್ನೋದುತ್ತಾರೆ ಅವರಿಗೆ ಅದೊಂದು ಚಟವೇ ಬಿದ್ದುಹೋಗಿದೆ. ಮುಂಜಾನೆಯಿಂದ ಮಲಗುವವರೆಗೆ ಪ್ರತಿಯೊಬ್ಬನ ಕೈಯಲ್ಲೊಂದೊಂದು ವೃತ್ತಪತ್ರಿಕೆಯು ಇದ್ದೇ ತೀರಬೇಕು. ಜರ್ಮನಿಯ ರಾಜಧಾನಿಯಾದ ಬರ್ಲಿನ್ ಪಟ್ಟಣ ಒಂದರಲ್ಲಿಯೇ ಪ್ರತಿ ದಿವಸ ಪ್ರಕಟವಾಗುವ ೮೦ ಪತ್ರಗಳಿರುವುವು!! ಲೋಕಾದರಕ್ಕೆ ಪಾತ್ರವಾದ ಒಂದೆರಡು ಪತ್ರಗಳು ಪ್ರತಿ ದಿವಸ ಮೂರು ಮೂರು ಸಲ ಪ್ರಕಟವಾಗುವುವು!! ಈ ೮೦ ಪತ್ರಗಳಲ್ಲಿ ೨ ಆಂಗ್ಲ ಭಾಷೆಯವು. ೧ ರಶಿಯನ್ ಭಾಷೆಯಲ್ಲಿ ಹೊರಡುವುದು. ಇನ್ನುಳಿದವುಗಳೆಲ್ಲಾ ಪೋಲೀಶ್ (ಪೋಲಂಡದ ಭಾಷೆ) ಯಲ್ಲಿ ಹೊರಡುವುವು. ಪ್ರತಿ ದಿವಸ ಇವೆಲ್ಲ ಪತ್ರಗಳ ಪ್ರತಿಗಳೂ ೩೫ ಲಕ್ಷಕ್ಕೆ ಮೀರಿ ಖರ್ಚಾಗುತ್ತವೆ! ಒಂದೇ ಬರ್ಲಿನದಲ್ಲಿಯೇ ವಾರ ಪತ್ರಗಳ ಪ್ರತಿಗಳು ೨೦ ಲಕ್ಷಕ್ಕೆ ಮಿಕ್ಕಿ ಮಾರಾಟವಾಗುತ್ತವೆ!! ಕೇವಲ ಶೈಕ್ಷಣಿಕ ವಿಷಯಗಳನ್ನೇ ಚರ್ಚಿಸುವ ಪತ್ರಗಳ ೧೧ ಲಕ್ಷ ಪ್ರತಿಗಳು ಖರ್ಚಾಗುವುವು!!! ಇಷ್ಟರ ಮೇಲಿಂದ ಪಾಶ್ಚಾತ್ಯ ರಾಷ್ಟ್ರಗಳಲ್ಲಿ ವಾಚನಾಭಿರುಚಿಯೂ ಶಿಕ್ಷಣ ಪ್ರಸಾರವೂ ಎಷ್ಟರಮಟ್ಟಿಗೆ ಆಗಿರಬಹುದೆಂದು ಊಹಿಸಬಹುದು! (ಕರ್ನಾಟಕ ಟೈಮ್ಸ್.)

ಹಾಸ್ಯವನ್ನು ಅವಸರದಿಂದ ಓದುವುದಲ್ಲ. ಅದರಲ್ಲಿನ ಶಬ್ದಾರ್ಥದಲ್ಲಡಗಿರುವ ಹಾಸ್ಯರಸವನ್ನು ಹೀರಬೇಕು

# ಬಡವರ ಬಂಧು ಹಾಸ್ಯೌಷಧಾಲಯ.

ಹಾಸ್ಯಸಂಗ್ರಹಕಾರರು ಬೇಕಾಗಿದ್ದಾರೆ. ಉತ್ತಮ ಹಾಸ್ಯಗಳಿಗೆ "ಸುಸ್ವಾಗತ"ವಿದೆ.

ಡಾಕ್ಟರರು:
ವಿದ್ವಾನ್ ರಾಮಕುಂಭಟ್ಟರು, ನಿರಕ್ಷರಕುಕ್ಷಿ.

**ಅತೀ ಅಗ್ಗ!** **ಮನೋರೋಗಕ್ಕೆ ಕೆಳಗಿನವು ದಿವ್ಯೌಷಧ.** **ನಗುವವರಿಗೆ ಧರ್ಮ!**

ಒಡೆಯ:—ಎಲೋ ನನ್ನ ಕಾಲಿನ ಜೋಡು ತಾರೋ!

ಆಳು:—ಅಪ್ಪಣೆ ಎಂದು ಒಂದು ನೂಲು ತುಂಡು ತಂದು, ಒಡೆಯನ ಕಾಲಿನ ಉದ್ದವನ್ನು ಅಳೆಯಲು ಪ್ರಾರಂಭಿಸಿದನು.

ಒಡೆಯ:—ಇದೇನು ಮಾಡುವೆಯೋ?

ಆಳು:—ಸ್ವಾಮಿ, ತಮ್ಮ ಕಾಲಿನ ಉದ್ದಳತೆಯನ್ನು ತೆಗೆಯುತ್ತೇನೆ.

ಒಡೆಯ:—ಅದೇಕೋ?

ಆಳು:—ತಮ್ಮ ಅಪ್ಪಣೆಯಂತೆ ಈ ಕಾಲಿನಷ್ಟೆ ಉದ್ದವಾದ ಇನ್ನೊಂದು ಜೋಡು ಕಾಲು ತರಲಿಕ್ಕೆ.

\+ \+ \+ \+ \+

ಕೇಶವ:—ಈ ಸುದ್ದಿಯು ಇಂದು ಸಂಜೆಯಾಗುವುದರೊಳಗೆ ಊರಲ್ಲೆಲ್ಲಾ ಹರಡಿಸಬೇಕೆಂದಿದೆ. ಅದಕ್ಕೇನು ಮಾಡಲೀ?

ನಾರಾಯಣ:— ನಿಮ್ಮ ಮನೆಯಲ್ಲಿ ಗಾಳಿಯ ಊದಿ ಇರುವುದಲ್ಲಾ? ಅದನ್ನು ಊದಿಬಿಡಿ.

ಕೇಶವ:—ನೀವು ಹೇಳಿದುದು ನನಗರ್ಥವಾಗಲಿಲ್ಲ.

ನಾರಾಯಣ:—ನಿಮ್ಮ ಹೆಂಡತಿಯ ಕಿವಿಯಲ್ಲಿ ಹೇಳಬೇಕೆಂಬುದೇ ಅದರ ಅರ್ಥ.

\+ \+ \+ \+ \+

ಯಜಮಾನ:—ಎಲೋ! ಆಚೆ ಮನೆಗೆ ಹೋಗಿ 'ಜನಾರ್ಧನನವರು ಎಲ್ಲಿಗೆ ಹೋಗಿರುತ್ತಾರೆಂದು ಕೇಳಿಬಾ.

ಸೇವಕನು:—ಸರಿ, ಎಂದು ಆಚೆಯ ಮನೆಗೆ ಹೋದನು. ಅಲ್ಲಿ ಹೊರಗೆ ಯಾರೂ ಇರಲಿಲ್ಲ. ಈ ಸೇವಕನು ಆ ಮನೆಯ ಜಗಲಿಯ ಮೇಲೆ ನಿಂತು 'ಜನಾರ್ಧನನವರು ಎಲ್ಲಿಗೆ ಹೋಗಿರುತ್ತಾರೆ?' ಎಂದು ಕೇಳಿ ಒಡನೆ ಹಿಂದಿರುಗಿ ತನ್ನ ಯಜಮಾನನೊಡನೆ "ಕೇಳಿ ಬಂದೆ ಸ್ವಾಮಿ" ಎಂದನು.

ಹೊರಗಿನಿಂದ:—ಅಮ್ಮಾ! ಯಜಮಾನರು ಮನೆಯಲ್ಲಿರುವರೇ?

ಯಜಮಾನಿ:—ಬೆಳಿಗ್ಗೆ ಹೊರಗೆ ಹೋದವರು ಇನ್ನೂ ಬರಲಿಲ್ಲ.

ಹೊರಗಿನಿಂದ:—ನಮ್ಮ ಯಜಮಾನರು ಅವರಿಗೆ ೨೫ ರೂಪಾಯಿಗಳನ್ನು ಕೊಟ್ಟು ಬಾ ಎಂದು ನನ್ನನ್ನು ಕಳುಹಿದ್ದಾರೆ.

ಯಜಮಾನಿ:—ಹಾಗಾದರೆ ಅವರು ಒಳಗೆ ಊಟ ಮಾಡುತ್ತಾರೆ. ಸ್ವಲ್ಪ ಕುಳಿತುಕೊ!

ಶ್ರೀ, ಟಿ ಸಿ. ಆರ್. ಸೆಟ್ಟಿ.

\+ \+ \+ * \+

ಒಬ್ಬ ಕಳ್ಳನು ನೆರೆಮನೆಗೆ ಹೋಗಿ ಒಂದು ತಂಬಿಗೆ ಕದ್ದು ತಂದು ಬೆಳಿಗ್ಗೆ ನೋಡಲು ಅದು ತನ್ನ ತಂಬಿಗೆಯೇ ಆಗಿದ್ದಿತು. ಆಗ ಆ ಚೋರನು:-'ನನ್ನದು ಕದ್ದುದಾರು? ಆತನನ್ನು ಹೂಣಿಟ್ಟರೂ ಸಾಲದು' ಎಂದನಂತೆ.

\+ \+ \+ \+ \+

ಸೀತು ಹೋದ ರೊಟ್ಟಿ ತಿಂದು ಹೊಟ್ಟೆ ನೋವು ತಂದುಕೊಂಡ ಲಕ್ಕಣ್ಣನು ವೈದ್ಯರ ಬಳಿಗೆ ಹೋಗಿ, ಔಷಧ ಕೇಳಲು—ವೈದ್ಯನು ಲಕ್ಕಣ್ಣನ ಕಣ್ಣಿಗೆ ಮದ್ದು ಹಾಕಿದನಂತೆ. ಕಣ್ಣಿಗೆ ಮದ್ದೇಕೆ ಹಾಕಿದ್ದೆಂದು ಪ್ರಶ್ನಿಸಲು-ಕಣ್ಣು ಸರಿಯಾಗಿರುತ್ತಿದ್ದರೆ ಸೀತು ಹೋದ ರೊಟ್ಟಿಯನ್ನು ಎಂದಿಗೂ ತಿನ್ನುತ್ತಿದ್ದಿಲ್ಲ ಎಂದು ವೈದ್ಯನು ಹೇಳಿದನು.

ಬಿ. ವಿ. ಸುವರ್ಣ.

ಕೋರ್ಟುಪೇದೆ:—ಬಾಯಿಯಲ್ಲಿದ್ದ ತಾಂಬೂಲವನ್ನು ಇಲ್ಲೇ ಉಗುಳಿ ಒಳಹೋಗತಕ್ಕದ್ದು.

ಕಕ್ಷಿಗಾರ:—ಏನಯ್ಯಾ! ನನ್ನ ಬಾಯಿಯಲ್ಲಿ ತಾಂಬೂಲವೇ ಇಲ್ಲವಲ್ಲಾ!

ಕೊ. ಪೇದೆ:—ಅದೇನೋ ನನಗೆ ಗೊತ್ತಿಲ್ಲ. ಬಾಯಿಯಲ್ಲಿಲ್ಲದಿದ್ದರೆ ಎಲ್ಲಿಂದಾದರೂ ತಿಂದುಕೊಂಡು ಬಂದು ಇಲ್ಲಿ ಉಗುಳಿ ಒಳಗೆ ಹೋಗತಕ್ಕದು.

\+ \+ \+ \+ \+

ಪೇದೆ:—ಏನು ಸ್ವಾಮಿ, ನಮಗೇನಾದರೂ ಕಾಫಿ ಕುಡಿಯಲಿಕ್ಕೆ ಕೊಡಲಿಕ್ಕಿಲ್ಲವೇ?

ಒಬ್ಬ:—ಬರೇ ಕಾಫಿ ಯಾಕೆ? ಊಟಕ್ಕೂ ಕೂಡ ನಾನೀಗ ಕಿಸ್ತು ಕಟ್ಟಿದ ಹಣದಿಂದಲೆ ನಿನಗೆ ಈ ತಿಂಗಳಗನೇ ತಾರೀಕಿನೊಳಗೆ ಸಂಬಳ ಕೊಡಲಿರುವರು. ಅದು ನಾನು ಕೊಟ್ಟದೆಂದೇ ತಿಳಿದುಬಿಡು.

B. N.

\+ \+ \+ \+ \+

ರಾಜ:—ಮಂತ್ರಿ, ಬದನೆಕಾಯಿ ಎಷ್ಟು ರುಚಿಯುಳ್ಳ ಪದಾರ್ಥ!

ಮಂತ್ರಿ:—ಹೌದು, ಮಹಾಸ್ವಾಮಿ, ಅದಕ್ಕಾಗಿಯೇ ದೇವರು ಅದರ ತಲೆಯ ಮೇಲೆ ಒಂದು ಕಿರೀಟವನ್ನಿಟ್ಟು ಗೌರವಿಸಿರುವನು.

ರಾಜ:—(ಬದನೆಯನ್ನು ಸ್ವಲ್ಪ ಸಮಯದ ವರೆಗೆ ವಿಪರೀತವಾಗಿ ತುರಿಕಜ್ಜಿಯಿಂದ ಬಳಲುತ್ತಾ) ಮಂತ್ರೀ! ಬದನೆಕಾಯಿಯಂತಹ ನೀಚ ಪದಾರ್ಥವು ಲೋಕದಲ್ಲಿ ಬೇರೊಂದಿಲ್ಲ.

ಮಂತ್ರಿ:—ಹೌದು ಮಹಾಸ್ವಾಮಿ, ಆದುದರಿಂದಲೇ ದೇವರು ಅದರ ತಲೆಯ ಮೇಲೆ ಒಂದು ಗೂಟವನ್ನು ಹೊಡೆದಿರುವುದು.

\+ \+ \+ \+ \+

ಒಬ್ಬ:—ನನ್ನ ಹೆಸರು ಪತ್ರಿಕೆಯಲ್ಲಿ ಬೀಳಬೇಕಾದರೆ ಏನು ಮಾಡಬೇಕು?

ಇನ್ನೊಬ್ಬ:—ನೀನು ಇಂದೇ ರಾತ್ರಿಗೆ ನಿನ್ನ ಕೊರಳಿಗೆ ನೇಣುಹಾಕಿ ಸತ್ತರೆ ನಾಳೆಯೇ ನಿನ್ನ ಹೆಸರು ಪತ್ರಿಕೆಯಲ್ಲಿ ಬೀಳುವುದು.

\+ * \+ \+ \+

ರಾಮು:— ಬಡವರ ಬಂಧುವಿಗೆ ಇದುವರೆಗೆ ಯಾರೂ ಬರೆಯದಿರುವ ವಿಷಯವನ್ನು ಬರೆಯಬೇಕೆಂದಿದ್ದೇನೆ. ಯಾವುದನ್ನು ಕುರಿತು ಬರೆಯಲೀ?

ಶ್ಯಾಮು:—"ನನಗೆ 'ಬಡವರ ಬಂಧು'ವನ್ನು ಫ್ರೀ ಕಳುಹಿಸಬೇಕೆ"ಂದು ಬರೆ.

(TIT-BITS.) (ಟಿಟ್-ಬಿಟ್ಸ್.)

# ಮೈಸೂರ್‌ನರ್ಸಣ್ಣನ ತಮಟೆ!

ಟಂ ಟಂ! ತಮಟೆ! ಎದ್ಕೊ ತಮಟೆ! ಸದ್ದು ಮಾಡು ತಮಟೆ! ಟಂ ಟಂ! ತಮಟೆ! ಹಲ್ಲೋ ಕಂಕನಾಡಿ ಕೊಂಕ್ಣಿ ದಿರ್ವೆಂ! ಗುಡ್ ನೈಟ್! ಗುಡ್ ಮಿಡ್‌ನೈಟ್! ಹಲ್ಲೋ ಕೊಂಕ್ಣಿ ದಿರ್ವೆಂಯ ಹೊಸ "ಚರ್ಮುರಿ" ಅಪ್ಪಣ್ಣ! ಓ ಬೊಪ್ಪಣ್ಣ! ನೀನು ಇಷ್ಟು ದಿವ್ಸಗಳೆಲ್ಲಿದ್ದೀಯಪ್ಪಣ್ಣ? ಎಲೋ ಕುಪ್ಪಣ್ಣ! ಓ ಸೊಪ್ಪಣ್ಣ! ಮೈಸೂರ್‌ನರ್ಸಣ್ಣನು ಎಂದೋ ನುಡ್ದ ನುಡಿಗೆ ನೀನು ಎಂದು ಉತ್ರವನ್ನು ಕೊಟ್ಟೀಯಪ್ಪಾ! ಅಬ್ಬಾ ನೀನು ಬದುಕಿಕೊಂಡದ್ದೆ! ಇಷ್ಟು ದಿವ್ಸ ನೀನು ಚರ್ಮುರಿ ಮಾರ್ತಾ ಇದ್ದದ್ದಾ! ಯಾರ್ದಾದರೂ ತಲೇಕೀಲೇ ಹೊಡ್ದಿಯಾ? ಅಯ್ಯೋ, ಪಾಪ! ಬಿಸ್ಲಿಗೆ ಚರ್ಮುರಿ ಮಾರ್ಲಿಕ್ಕೆ ಹೋಗಿ ನಿನ್ನ ಮುಖಾ ಇಷ್ಟು ಬಾತಿಕೊಂಡ್ದೆಯಲ್ಲಾ? ನಿಂಗೆ ಆ ಕಪ್ಪು ಕುತಾಂ ಯಾರಪ್ಪಾ ಕೊಟ್ರು? ಆ ಒಟ್ಟೆ ಕನ್ನಡ ಎಲ್ಲಿಂದ ಜಾರ್ಸಿ ಬಿಟ್ಯಪ್ಪಾ? ನಿನ್ನ ನಾಲ್ಗೆಯನ್ಯಾರಪ್ಪಾ ಅಷ್ಟು ಉದ್ದಕ್ಕೆಳ್ದು ಬಿಟ್ರು? ಏ ಅಪ್ಪಣ್ಣ! ಹೇ ತೊಪ್ಪಣ್ಣ! ನಿನ್ನ ಆ ಡೊಳ್ಳು ಹೊಟ್ಟೆಯೊಳ್ಗೇನಿರ್ವುದಣ್ಣ! ಚರ್ಮುರಿಯೇ? ಮತ್ಸರದ ಮುದ್ದೆಯೇ! ಏನೋ? ಹೇ ಚರ್ಮುರಿ ಅಪ್ಪಣ್ಣ! ದೊಡ್ಡ ನಾಲ್ಗೆಯು ಯಾವಾಗ್ಲೂ ಕೆಟ್ಟದ್ದು ಮಗೂ! ಆ ನಾಲ್ಗೆಯನ್ನು ಸ್ವಲ್ಪ ಬಿಗೀ ಹಿಡೀಯಪ್ಪಾ! ನಿನ್ನ ಜಲ್ಮವು ಗೊತ್ತಿದೆ. ಹೇಳ್ಬಿಡಲೇ! ಅಷ್ಟಕ್ಕೇ ನಿನ್ನನೀ ಸಲ ಬಿಡ್ತೇನೆ! ತಿಳೀತೇ?ಹೆದ್ರಿಕೆ ಇರೂತ್ತಿದ್ದಿಲ್ಲವಾದ್ರೆ ಕೊಂಕ್ಣಿದಿರ್ವೆಂ ಎಕ್ಸ್‌ಚೇಂಜ್ ಪೇಪರನ್ನು ಯಾಕೆ ನಿಲ್ಸಿತು? ಅಪ್ಪಣ್ಣನ ಸಂಚಿಕೆಯನ್ನು ನಮಗ್ಯಾಕೆ ಕಳ್ಸಲಿಲ್ಲಾ? ಬಡವ್ರ ಬಂಧೂವು ಎಕ್ಸ್‌ಚೇಂಜ್ ಕಳ್ಸಿತಲ್ಲಾ? ಎಲ್ಲೋ ಅಪ್ಪಣ್ಣಾ! ನೀನೇ ತಪ್ಪಣ್ಣ! ನನ್ ಮಾತು ಒಪ್ಪಣ್ಣ! ನಿನ್ ತಲ್ಗೊಂದು ಮುಂಡಾಸಣ್ಣ! ನೀನು ಒಬ್ಬ ಬಪ್ಪಣ್ಣ! ಎಲಾ ಟಂಟಂ ತಮಟೆ! ನಿಲ್ಲು ನಿಲ್ಲು ಸಾಕುಮಾಡು!

× × × ×

ಮುಂಬ್ಯಾಯ ಮಿಸ್ಟರ್ ಶಿರಿಯಾನನೇ! ನೀನು ಮುಂಚೆ ಎಷ್ಟು ಜನ್ರಿಗೆ ಪತ್ರಾ ಬರ್ದಿದ್ದೀ? ಬುಕ್‌ಪೋಸ್ಟ್ ಮೂಲ್ಕ ಯಾರ್ಯಾರಿಗೆ ಪತ್ರಾ ಬರ್ದು ಎಲ್ರಿಗೂ ಎರಡಾಣೆ ನಷ್ಟ ಮಾಡ್ದಿಯಲ್ಲಾ? ಇಂತಹ ಲೋಭದ ನೀನು ಮತ್ತೆಷ್ಟು ಬುದ್ದಿವಂತ? ನೀನು ರಾಮರಾಯ್ರನ್ನು ಬೈದಿರುವಿಯಲ್ಲಾ? ಎಲ್ಲಕ್ಕೂ ಕಾರ್ಣ "ಅವನು" ಎಂದು ಬೈದಿದ್ದೀಯಲ್ಲಾ? ಕಳ್ಳ 'ತಲೇಲಿ ಕಸಾ ಉಂಟೆಂದಾಗ' ಕೈಹಾಕಿದ ನಂತೆ. ಹಾಂಗೇ ನೀನೂ ಮಾಡ್ತಿ! ಸುಮ್ಮಗಾಗು. ಎಲ್ಲವನ್ನೂ ಹೇಳ್‌ಬಿಟ್ಟೇನು ತಿಳ್ದಿರಲಿ! ನರ್ಸಣ್ಣನೊಡನೆ ತಮಾಷೆ ಬೇಡಾ ತಿಳಿಯಿತೇ? ಹ್ದ! ಹ್ದ!!

× × × ×

ಕಾರ್ಕಳದ ಗುಮ್ಮ ದೇವ್ರನ್ನು ಹೊಗ್ಳುತ್ತಾ ಪ್ರತ್ಯೇಕ ಶ್ರೀ! ಸೆಟ್ರೊಬ್ಬರು 'ವಿಶ್ವ ಬಂಧು'ವಿನಲ್ಲಿ "ಮೈಸೂರ್ ನರ್ಸಣ್ಣನ ಪಿಟಿಲು ದುರ್ನಾದವನ್ನೆಬ್ಬಿಸಿದೆ" ಅಂದಿದ್ದಾರೆ. ಅಯ್ಯಾ ಶೆಟ್ರೆ! ನನ್ನ ಕಳ್ದ ಸಲ್ದ ಮಾತನ್ನು ಪುನಃ ಓದ್ಬಿಡಿ! ಲೇಖನಿ ನನ್ನಲ್ಲೂ ಉಂಟು! ಪಾಂಡುರೋಗದವ್ರಿಗೆ ಊರೆಲ್ಲಾ ಹಳ್ದಿ ಎಂಬ ಗಾದೆ! ಗುಮ್ಮನನ್ನು ವಿವರಿಸಬಾರ್ದು ಎಂದು ನೀವು ರಾಷ್ಟ್ರಬಂಧುವಿನ ಲೇಖಕರೊಬ್ರಿಗೂ ಬಿಟ್ಟ ಒರ್ಡಿನೆನ್ಸು ಬಲವಾಗಿದೆ. ಸರ್ಕಾರದ ಒರ್ಡಿನೆನ್ಸಿನಿಂದ್ಲೂ ನಿಮ್ದು ಬಲಾ ಆಯಿತಲ್ಲ?

× × × ×

ತೋಟಿಗಳ ಪರ್ವಾಗಿ ನಾನು ಕಳ್ದ ಸಲ ಒಂದೆರ್ಡು ಮಾತುಗಳನ್ನು ಹೇಳಿರುವುದಕ್ಕಾಗಿ ಕೆಲವು ಮಹಾಶಯ್ರು ಗುಜುಗುಜು ಮಾತ್ನಾಡುತ್ತಿದ್ದಾರೆ. "ಇಷ್ಟು ಸಣ್ಣ ಮೈಸೂರ್ ನರ್ಸಣ್ಣ! ಜೋರಿದ್ದಾನೆ! ಎನ್ನುತ್ತಿದ್ದಾರೆ! ಏನ್ರಯ್ಯಾ! ನ್ಯಾಯಕ್ಕೆ ಭಯವಿಲ್ಲ! ಸತ್ಯಕ್ಕೆ ಸಾವಿಲ್ಲ. ಅಪ್ರಿಯವಾದ ಸತ್ಯವನ್ನು ಹೇಳ್ತೇನೆ ಎಂದು ನೀವು ನಂಗೆ ಹೊಡೀರಾ? ಹೊಡೀ ಬೇಡ್ರಿ ಏನ್ರೇ! ನನ್ನಾಣೆ! ನನಪ್ಪನಾಣೆ! ಕೊ. ದಿರ್ವೆಂ "ಚರ್ಮುರಿ ಅಪ್ಪಣ್ಣ"ನಾಣೆ!

× × × ×

ಬಡವ್ರ ಪರ್ವಾಗಿ ಬಡವ್ರ ಬಂಧೂನ "ಮೈಸೂರ್ ನರ್ಸಣ್ಣ"ನು ಮಾತ್ನಾಡದಿದ್ದ ಮತ್ತೇನು ಸಾರ್ಥಕ? ಬಡವ್ರ ಪರ್ವಾಗಿ ಬಡವ್ರ ಬಂಧೂವು ಎಷ್ಟು ಕಷ್ಟಕ್ಕೊಳಗಾದ್ರೂ ಅದೊಂದು ಕಷ್ಟವಲ್ಲ. ದೊಡ್ಡ ಸಂಗ್ತಿ ಅಲ್ಲ. ಬ. ಬ.ನು ಎಲ್ಲಕ್ಕೂ ತಯಾರ್. ದೊಡ್ಡವ್ರ ಕೋಪಕ್ಕೆ ಬಡವ್ರು ಹೆದ್ರಾರೇನು? ಹೆದರ್ಲಿಕ್ಕೇನು ದೊಡ್ಡವ್ರ ಜಾಗಾವಲ್ಲಿ ಮನೆಗಿನೇ ಕಟ್ಟಿ ಒಕ್ಲು ಕಿಕ್ಲು ಆಗಿದ್ದೇವೇನ್ರಿ? ಇಲ್ವಲ್ಲಾ? ಬಡವ್ರು ಎಲ್ಲಕ್ಕೂ ತಯಾರ್, ಪೆಟ್ಟು ತಿನ್ನಲಿಕ್ಕೂ . . .

× × × ×

ಮಿಸ್ಟರ್ ತಿಮ್ಮಪ್ಪನಪ್ಪೇ! ಲೇಖಕ್ರು ಒಳ್ಳೊಳ್ಳೆ ಕಹೆಗೀತೇ ಬರೀ ಬೇಕು ಎಂದು ಹೇಳ್ತೀರಲ್ಲಾ?—ದೊಡ್ಡ ಜನ್ದ ಹಾಗೆ! ಕನ್ನ ಪಂಡ್ತಿನ ಹಾಗೆ! ಇದ್ರ ಮೊದ್ಲು ಎಷ್ಟು ಕನ್ನ ಲೇಖ ಬರೆದಿದ್ದೀರಿ? ಯಾವ ಪತ್ರಿಕೆಗೆ? ಬುದ್ಧಿ ಹೇಳಿದ್ರೆ ಸಾಲ್ದು! ಬರೆದು ಕೊಡ್ಬೇಕು. ನಿಮ್ಮಂತೆ ಮತ್ತೊಬ್ಬರಿದ್ದಾರೆ! ದೂಷಣೆಯ ನಾಲ್ಗೆಯನ್ನು ಹಿಂದೆ ಕ್ಕೆಳೆದಿಡ್ಬೇಕು! ಯಾರ್ಯಾರನ್ನು ದೂರಿ ಅಭ್ಯಾಸವುಂಟೆಂದು ಯಾರ್ಯಾರನ್ನು ದೂರ ಬೇಡ್ರಿ! ನೀವು ಭಾರೀ ಬುದ್ಧೀವಂತ್ರು ಎಂದು ಗೊತ್ತು! ೬ನೇ ಫೋರ್ಮಿನಲ್ಲಿ ೪ ವರ್ಷ ತೇಲಾಡಿ ಮುಳುಗಿ ಪುಣ್ಯಕ್ಕೆ ಎದ್ದು ಈಗ ಗುಡ್ಡೆಗೆ ಹತ್ತೀರಿ! ಅರ್ಟಿಕಲು ಬರೆಯಲು ಶಾಯಿಬೇಕೇ? ಹೇಂಡ್ಲ್ ಬೇಕೇ? ೧೨ ಗಂಟೆ ರಾತ್ರೆ (ಪೋಲೀಸು ನೋಡ್ದಂತೆ) ಶೆಣೈ ಬ್ರದರ್ಸ್ ಅತ್ಲಾಗಿನ ಅಂಡ್ಡಿಗೆ ಹೋಗ್ರಿ.

× × × ×

ನಿಮ್ಮಲ್ಲಿ ಗೋಡೆಗ್ಳ ಮೇಲಿರ್ವ ಟಪ್ಪಾಲುಪೆಟ್ಗೆಯಲ್ಲಿನ ಕಾಗ್ದಗಳ್ನು ಎಷ್ಟು ಗಂಟ್ಗೆ ತೆಗೆವುದು? ಮೊನ್ನೆ ನಾನು ದಾರಿ ಮೇಲೆ ಹೋಗ್ವಾಗ ಒಬ್ಬ ಪೋಸ್ಟ್‌ಮೇನನು ೩-೩೦ಕ್ಕೇನೆ ಪೆಟ್ಗೆಯನ್ನು ಕ್ಲಿಯರ್ ಮಾಡ್ದ. Next clearance 4-30 P. M. ಎಂದಿರೋದು ಈ ಪೋಸ್ಟುಮೇನನಿಗೆ ಗೊತ್ತಿಲ್ವಾ? ಇಷ್ಟು ಅವಸರ್ವೇ?

× × × ×

"ಹಾ ದೇವಣ್ಣ! ನಿನ್ನ ಗತಿಯೇ!" ಎಂಬ ಕಥೆಯನ್ನು ಬರೆದವರನ್ನು ಒಬ್ಬರು ಮೇಸ್ಟರು ನಿಲ್ಲಿಸಿ ಜೋರ್ ಮಾಡಿ "ಏನೋ ಆ ಕಥೆ ಬರವಲ್ದು ಯಾಕೋ ಜಾಗ್ರತೆ ಮಂಡೆಗಿಂಡೆ—ಜಾಗ್ರತೆ! ನಾನು ಯಾರೆಂದು ತಿಳಿದಿರುವುದೋ! ಪತ್ರವ್ಯವಹಾರ ಮಾಡ್ತೇನೆ ನೋಡಿ!" ಎಂದು ಗದ್ರಿಸಿದ್ದಾರಂತೆ! ಆ ಕಥೆ ಇವರಿಗೇಕೆ ಅನ್ವಯಿಸುತ್ತದೆಯೋ ನಾ ಕಾಣೆ! ಪಬ್ಲಾಕ್ಕಿಗೆ ಹೆದ್ರುವವರಿದ್ದಾರೆಯೇ?

+ × × ×

ದೇಶ್ದಲ್ಲಿ ಈಗ ಗಾಂಧಿ—ಸರಕಾರಗಳೊಳ್ಗಿನ ರಾಜಿಯ ಸುದ್ದಿ! ಎಲ್ಲೆಲ್ಲೂ ರಾಜಿ! ಮಂಗಳೂರ್ ಮ್ಯುನಿಸಿಪಲ್ಟಿ—ತೋಟಿಗಳಿಗೂ ರಾಜಿ! ತೋಟಿಗಳೇ ಬಹಳ ಒಳ್ಳೇದು ಮಾಡಿದ್ರಿ! ಇನ್ನು ಮುಂದೆ ಮಾತ್ರ ಜಾಗ್ರತೆ!

+ × × ×

ಕಳೆದ ಸಂಚಿಕೆಯಲ್ಲಿ ಮಿಸ್ಟರ್ ಜೋರ್ಜ್ ಹರ್ಬರ್ಟರಿಗೆ "ನಿಮ್ಮ ಮಿತ್ರ"ರು ಹಾಕಿದ ಪ್ರಶ್ನೆಗಳಿಗೆ ಜವಾಬು ಎಂಬಂತೆ ಜೋರ್ಜ್ ಹರ್ಬರ್ಟರು ಕಂಠೀರವದಲ್ಲಿ ಹೀಗೆ ಬರೆದಿದ್ದಾರೆ:—"Badavara Bandhu" the infant among our Canarese Journals rejoices apparently in the thought that it has scored a victory over me. I am too insignificant a man for its very learned contributors to deserve so much of their kind attention on a most trifling matter. I have no quarrel and do not wish to carry on the contraversy" ಓಂ ಶಾಂತಿ! ಶಾಂತಿ! ಶಾಂತಿ!

# ಬಂಗಾಳದಲ್ಲಿ ಮೂವರ ಮೇಲೆ ಗುಂಡು!!!

—ಬರುವ ಅಕ್ಟೋಬರ ತಾ. ೯ನೇ ದಿನ ಪಂಡಿತ ಮಾಲವೀಯರ ಅಧ್ಯಕ್ಷತೆಯಿಂದ ಕರಾಚಿಯಲ್ಲಿ ಬೈ ಇಂಡಿಯನ್ ಕೊಂಗ್ರೆಸು ಜರಗಲಿರುವುದು.

—ಅಲ್ಲಹಾಬಾದಿನ ಯುರೋಪಿಯಾನನೊಬ್ಬನು ತನ್ನ ಪ್ರೇಮಸಿಯೊಂದಿಗೆ ವಿಹಾರಭೂಮಿಯಲ್ಲಿ ಕುಳಿತಿದ್ದಾಗ ಒಬ್ಬ ಅಪರಿಚಯಸ್ಥ ಹಿಂದೂ ತರುಣನು ಅವನನ್ನು ತಿವಿದು ಓಡಿದನು. ಯುರೋಪಿಯಾನನು ಸುಖವಾಗಿದ್ದಾನೆ. ಅಪಾದಿತನು ಕಾಲಿಗೆ ಬುದ್ಧಿ ಹೇಳಿದ್ದಾನೆ.

—ಶ್ರೀಮತಿ ಕಮಲಾದೇವಿ ಚಟ್ಟೋಪಾಧ್ಯಾಯರು ಬೆಳಗಾಂವಿ ಸೆರೆಮನೆಯಲ್ಲಿ ರುವರೆಂದು ತಿಳಿದುಬಂದಿದೆ.

—ಕಳೆದ ತಾ. ೧ನೇ ದಿನ ನಾಸಿಕದಲ್ಲಿ ಅನೇಕ ಬೈರಾಗಿಗಳು ಬತ್ತಲೆಯಾಗಿ ಮೆರವಣಿಗೆ ಮಾಡಿದರು. ೧೫,೦೦೦ ಜನರು ಸಭೆಗೂಡಿ ಆನಂದಪಟ್ಟರು.

—ಶರಾಯಿ ಕುಡಿದು ಮುಂಬಾಯಿಯಲ್ಲಿ ಮೋಟರ್ ಚಲಿಸಿ, ಧಕ್ಕೆ ಬಡೆದ ಸಿನೆಮ ನಟಿ ಮಿಸ್ ಎರ್ಮಲೈನ್‌ಳಿಗೆ ೪೦ ರೂಪಾಯಿ ಜುಲುಮಾನೆಯಾಯಿತು. ಹಣವನ್ನು ಒಡನೆ ತನ್ನ 'ಬೇಗ್'ನಿಂದ ತೆಗೆದುಕೊಟ್ಟಳು. ಮದ್ಯದ ಪ್ರಭಾವ.

—ಬರ್ದ್ವಾನ್ ಜಿಲ್ಲೆಯ ರಂಜನಬಗಿ ಮತ್ತು ಹುಸ್ಸೇನಬುದಾ ಎಂಬ ಜಗಜಟ್ಟಿಗಳು ರಂಗದಲ್ಲಿ ಯುದ್ಧ ಮಾಡಿ ಸಭಿಕರ ಕೈ ಚಪ್ಪಾಳೆಗೆ ಪಾತ್ರರಾದರು. ಅಷ್ಟರಲ್ಲಿ ರಂಜನನು ಕೆಳಗೆ ಬಿದ್ದುಬಿಟ್ಟನು! ಎಲ್ಲರಿಗೂ ಆಶ್ಚರ್ಯ! ಆ ಆಶ್ಚರ್ಯದೊಡನೆ ರಂಜನನ ಪ್ರಾಣ ಸ್ವರ್ಗಕ್ಕಡರಿತು.

—ಅಗೋಸ್ತು ಆದಿಯಲ್ಲಿ ಕೊಮಿಲ್ಲದಲ್ಲಿ ಮಿ। ಎಲ್ಲಿಸನರೆಂಬ ಪೋಲೀಸ್ ಅಧಿಕಾರಿಗೆ ಒಬ್ಬ ಬಂಗಾಳಿ ಯುವಕನು ಗುಂಡುಬಿಟ್ಟನು. ಅವರು ಆಸ್ಪತ್ರೆಯಲ್ಲಿ ಮಡಿದರು. ಅಪಾದಿತನನ್ನು ಸೆರೆಹಿಡಿದಿರುವರು.

—ಕಲ್ಕತ್ತದ "ಸ್ಟೇಟ್ಸ್‌ಮೇನ್" ಪತ್ರಿಕೆಯ ಸಂಪಾದಕರಾದ ಸರ್ ವೋಟ್ಸನ್ ಎಂಬವರಿಗೆ ಒಬ್ಬ ಬಂಗಾಳಿ ಯುವಕನು ಗುಂಡುಬಿಟ್ಟನು. ಅವನನ್ನು ಹಿಡಿಯಲಾಗಿ ಅವನು ತನ್ನ ಜೇಬಿನೊಳಗಿನ ವಿಷವನ್ನು ತಿಂದು ಕೂಡಲೇ ಸತ್ತನು. ವೋಟ್ಸನರು ಸುಖವಾಗಿಯೇ ಇರುವರು.

—ಡೆಕ್ಕಾದಲ್ಲಿನ ಪೋಲೀಸ್ ಸುಪರಿಂಟೆಂಡೆಂಟರಾದ ಗ್ರಾಸ್‌ಬಿ ಎಂಬವರಿಗೆ ಒಬ್ಬ ಯುವಕನು ಗುಂಡುಬಿಟ್ಟನು. ಅವನನ್ನು ಸೆರೆಹಿಡಿದರು. ಗ್ರಾಸ್‌ಬಿಯವರಿಗೆ ಹೆಚ್ಚಿನ ಜಖಂ ಉಂಟಾಗಲಿಲ್ಲ.

—ಡೆಕ್ಕಾದ ಸದ್ಗೃಹಸ್ಥರಾದ ರ್‍ಯಾ ಸಾಹೇಬ್ ಚಿಂತಾಹರಣರೆಂಬವರ ಆರು ನಳಿಗೆಗಳ ಪಿಸ್ತೂಲು ಒಂದು ಕಳವಾಗಿ ಹೋಗಿ, ಅವರು ಚಿಂತಾಸಾಗರರಾಗಿದ್ದಾರೆ ಕೆಲವು ಯುವಕ ಯುವತಿಯರನ್ನು ಸೆರೆಹಿಡಿದಿರುವರು.

—ಕಲ್ಕತ್ತೆಯಲ್ಲಿ ನಾರು ಗಿರಣಿಗಾರರು ಮುಷ್ಕರ ಹಿಡಿದಿರುವರು. ಅವರು ಕೆಲವು ಅಂಗಡಿಗಳಲ್ಲಿ ಸುಲಿಗೆ ನಡೆಸಿದರು.

—ಹೊಲ್ಲೆಂಡಿನಿಂದ ಕರಾಚಿ ನಗರಕ್ಕೆ ಬರೇ ಮೂರು ದಿನಗಳಲ್ಲಿ ಹಾರಲಿರುವ ಒಂದು ವಿಮಾನವು ಸಿದ್ಧವಾಗಿದೆ. ಸೈನ್ಯವು ಬರದಿದ್ದರೆ ಸಾಕು!

—ಗಾಂಧಿಜೀಯವರು ಸೆರೆಮನೆಯಿಂದ ನಡೆಸುತ್ತಿದ್ದ ಪತ್ರವ್ಯವಹಾರಗಳು ವಿಳಾಸದಾರರಿಗೆ ಕ್ಲಪ್ತಕಾಲಕ್ಕೆ ಮುಟ್ಟುತ್ತಿದ್ದಿಲ್ಲವೆಂದೂ, ಆ ವಿಷಯಕವಾಗಿ ಈಗ ಸುವ್ಯವಸ್ಥೆ ಮಾಡಲಾಗಿ ಈಗ ಎಲ್ಲವೂ ಸರಿಹೋಗಿಪವೆಂದೂ ತಿಳಿದುಬರುತ್ತದೆ.

—ಮದ್ರಾಸಿನ ಬ್ರೋಡ್‌ವೇ ರಸ್ತೆಯ ಫ್ರಾನ್ಸಿಸ್ ಕ್ಸೇವಿಯರ್ ಇಗರ್ಜಿಯಲ್ಲಿ ಕಳವು ನಡೆದಿದೆ. ಚರ್ಚಿನಲ್ಲಿ ಹೀಗೆ ಮಾಡಿದುದು ಮದರಾಶಿಯಲ್ಲವೇ?

—ಅಪ್ಪಣೆ ವಿನಹ ಮುಂಬಾಯಿಗೆ ಕಾಲಿಡಬಾರದೆಂದು ಮೀರಾಬೆನ್ (ಗಾಂಧಿಜೀಯವರ ಶಿಷ್ಯೆ ಮಿಸ್ ಸ್ಲೇಡ್) ಇವರಿಗೆ ಆಜ್ಞೆಯಿತ್ತಾದರೂ, ಇವರದನ್ನುಲ್ಲಂಘಿಸಿದುದಕ್ಕಾಗಿ ಒಂದು ವರ್ಷದ ಸಾದಾ ಸಜೆಯು ವಿಧಿಸಲ್ಪಟ್ಟಿತು.

—ಪೇಶಾವರದ ಪೋಲೀಸ್ ಕಮಿಶನರರಿಗೆ ಇನ್ನಿತರ ಕೆಲವು ಅಧಿಕಾರಿಗಳಿಗೂ ಭಯಸೂಚಕ ಪತ್ರಗಳೂ ಬಂದಿವೆಯೆಂದು ತಿಳಿದುಬಂದಿದೆ.

—ಡಾ। ಅನ್ಸಾರಿಯವರು ಆರೋಗ್ಯಲಾಭಕ್ಕಾಗಿ ಯುರೋಪಿಗೆ ಹೋ... ಹೋಗುವ ಮೊದಲು ಗಾಂಧಿಜೀಯವರನ್ನು ಸಂದರ್ಶಿಸಬೇಕೆಂದು ಬಗೆದರೂ ... ದೊರೆಯಲಿಲ್ಲ.

—ಪೊಂಡಿಚೇರಿಯಲ್ಲಿ ೨೨ ಮಂದಿಗಳಿದ್ದ ಒಂದು ಬಸ್ಸು ಓರ್ವ ಸ್ತ್ರೀಯ... ಬೀಳುವ ಪ್ರಸಂಗವನ್ನು ತಪ್ಪಿಸ ಹೋಗಿ ಇನ್ನೊಂದು ಕಡೆಯಲ್ಲಿ ಮರಕ್ಕೆ ಢಕ್ಕೆ ಬ... ೫ ಜನರನ್ನು ಸ್ವರ್ಗಕ್ಕೂ ೨೨ ಮಂದಿಗಳನ್ನು ಆಸ್ಪತ್ರೆಗೂ ಕಳುಹಿಸಿತು.

—ಕಲ್ಕತ್ತದಲ್ಲಿ ವಿಶ್ವನಾಥಸಿಂಗನೆಂಬವನು ಲೈಸನ್ಸು ಇಲ್ಲದ ಪಿಸ್ತೂಲನ್ನು ಕೊಂಡಿದ್ದುದಕ್ಕಾಗಿ ಬರೇ ಎರಡು ವರ್ಷಗಳ ಸಜೆಗೊಳಗಾದನು.

—ಮುಂಬಾಯಿಯ ಹಿಂದೂಮುಸಲ್ಮಾನರ ಗಲಭೆಯಲ್ಲಿ ಭಾಗವಹಿಸಿ, ಹಿಂದೂವನ್ನು ಪರಲೋಕಕ್ಕಟ್ಟಿದ ಹುಸ್ಸೇನ ಅಹಮದ್ ಮಹಮದ್ ಎಂಬನಿಗೆ ... ಶಿಕ್ಷೆಯು ವಿಧಿಸಲಾಗಿದೆ, ದುಃಖದ ಸಂಗತಿ.

—ನಾಗಪುರದ ಲೊ ಕೋಲೇಜಿನ ಪ್ರಿನ್ಸಿಪಾಲರು ವಿದ್ಯಾರ್ಥಿಗಳ ನಡವ... ಕುರಿತು ತನಗೆ ಆಗಾಗ ತಿಳಿಸಬೇಕೆಂದು ಪೇದೆಗೆ ಅಪ್ಪಣೆಮಾಡಿದುದನ್ನು ೧೭೦ ವಿದ... ಗಳು ತಿಳಿದು ಮುಷ್ಕರ ಹಿಡಿದಿರುವರು. ಪ್ರಿನ್ಸಿಪಾಲರು 'ಸೋರಿ' ಎನ್ನುವರೇ?

—ಬಂಗಾಳದಲ್ಲಿ ಜನವರಿಯಿಂದ ಆಗೋಸ್ತು ತನಕ ಒಟ್ಟು ೯,೬೧೭ ಪುರು... ೬೨೧ ಮಂದಿ ಸ್ತ್ರೀಯರೂ ರಾಜಕೀಯ ಸಂಬಂಧವಾಗಿ ಶಿಕ್ಷಿಸಲ್ಪಟ್ಟರು.

—ಲಾಹೋರಿನ ಮುನಿಸಿಪಾಲಿಟಿಯ ಸಭಾಮಂದಿರದಲ್ಲಿ ದಿವಂಗತ ... ಮೋತಿಲಾಲ ನೆಹರುರವರ ತೈಲಚಿತ್ರವನ್ನು ಅದರ ಕಮಿಟಿಯು ಮೆಚ್ಚದಿಂದಿ... ಕೂಡಾ ಅಧಿಕಾರ ವರ್ಗವು ಅಸಮ್ಮತಿಸಿದೆ. ಸಾರ್ವಜನಿಕ ನಿಧಿಯಿಂದ ಅದನ್ನು ... ಸುವರಾಗಿ ತಿಳಿದುಬಂದಿದೆ.

—ನೊವಾಕೋಲಿಯಲ್ಲಿ ಒಂದು ದೋಣಿಯು ಕವಚಿಬಿದ್ದು ೨೬ ಮಂ... ನೀರಲ್ಲಿ ಮುಳುಗಿ ಮರಣಹೊಂದಿದರು.

—ಶ್ರೀಯುತ ವಲ್ಲಭಭಾಯಿಪಟೇಲರ ಪುತ್ರಿ ಶ್ರೀಮತಿ ಮಣೀಬೆನ್ ಪಟೇ... ಕಾನೂನುಲ್ಲಂಘನೆ ಮಾಡಿದುದಕ್ಕಾಗಿ ಮುಂಬಾಯಿಯಲ್ಲಿ ೧೫ ತಿಂಗಳ ಕಠಿಣ... ಗೊಳಗಾದರು.

—ಕಾಂಗಾ ಜಿಲ್ಲೆಯಲ್ಲಿ ಒಬ್ಬಳು ಸ್ತ್ರೀಯು ತನ್ನ ಪತಿಯ ಮರಣದಿ... ದುಃಖಗೊಂಡು ಅನ್ನಾಹಾರ ಸೇವಿಸದೆ ಮಲಗಿರುವಳು. ಉಪವಾಸಬಿದ್ದು ... ತಿಂಗಳು ದಾಟಿತು.

—ಕಲ್ಲಿಕೋಟೆಯಲ್ಲಿ ಒಬ್ಬ ಬಾಲಕನು ರಾತ್ರಿ ಒಂದು ಹಾವನ್ನು ಅಕಸ... ಮೆಟ್ಟಿ ಮನೆಗೆ ಬಂದನು. ಅವನು ನಿದ್ರಿಸಿದಲ್ಲಿಗೂ ಆ ಹಾವು ಬಂದು ಕ... ಅವನನ್ನು ಕೊಂದಿಕ್ಕಿತು. ನಾಗಣ್ಣನ ಮೇಲೆ ಭಕ್ತಿಯು ಹೆಚ್ಚುವಂತಾಯಿತು!

—ಮುಜಾಫರ್‌ಪುರದ ಸಕ್ರ ಎಂಬಲ್ಲಿ ಒಬ್ಬ ಹೆಂಗುಸು ಬೆಳಿಗ್ಗೆ ಒ... ಮಧ್ಯಾಹ್ನ ಒಂದು, ಸಂಜೆಗೆ ಒಂದು, ಹೀಗೆ ಮೂರು ಮಕ್ಕಳನ್ನು ಹೆತ್ತಳು. ಎಲ್ಲ... ಸೌಖ್ಯವೇ ಸರಿ.

— ಮುಂಬಾಯಿಯಲ್ಲಿ ಸದ್ಯದಲ್ಲೇ "ರಾಷ್ಟ್ರೀಯ ಕರ್ನಾಟಕ ಬಡವರ... ಸಂಘ"ವೆಂಬ ಸಂಸ್ಥೆಯೊಂದು ಶ್ರೀ। ವಾಸುದೇವರಾವ್ ಶಿಬ್ರೂರ್‌ಕಾರ್ ಇವರ ನೇ... ದಲ್ಲಿ ಜರಗಲಿರುವುದೆಂಬುದು ಸ್ತುತ್ಯ! "ಬಡವರ ಬಂಧು"ಗಳಿಗೆ ಜಯವಾಗಲಿ...

—ಅಲ್ಲಹಾಬಾದಿನಲ್ಲಿ ಜಿ. ಇ. ಪಿ. ರೈಲ್ವೆಯ ಅಧಿಕಾರಿಗಳಲ್ಲೊಬ್ಬರಾದ ... ಎ ಫ್, ಐ. ಟೆಗೋ ಎಂಬವರ ಮನೆಗೆ ರಾತ್ರೆ ಯಾರೋ ಹೊಕ್ಕು ಅವರನ್ನು ಕೊ... ಇದ್ದುಬದ್ದುದನ್ನು ದೋಚಿಕೊಂಡೊಯ್ದಿರುವರು. ಇಷ್ಟಾಗುವಾಗ ಅವರ ಪತ್ನಿ... ಸಿನೇಮಕ್ಕೆ ಹೋಗಿದ್ದರಂತೆ!

—೧೬೫ ಗಿಳಿಗಳನ್ನು ಒಂದೇ ಗೂಡಿನಲ್ಲಿ ಹಾಕಿ ಅವುಗಳ ಜೀವಿತಕ್ಕೆ ತೊ... ಕೊಟ್ಟ ಅವುಗಳ ಯಜಮಾನನಿಗೆ ಕೊಲೊಂಬೊ ಕೋರ್ಟಿನಲ್ಲಿ ಇಡೀ ಬ... ರೂಪಾಯಿಯ ಜುಲುಮಾನೆಯಾಯಿತು. ಅಹಿಂಸಾ ಪರಮೋ ಧರ್ಮ!

Reg. No. M. 2771 “ಬಡವರ ಬಂಧು” ಮಂಗಳೂರು.



Printed by V. S. Kamath at the Sharada Press, Mangalore and published by Mangalore Jarappa at the Badavara Bandhu Office, Hampankatta, Mangalo